# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 41(221) |
| ಸದಸ್ಯರ ಹೆಸರು | : | ಶ್ರೀ ಎಸ್.ರವಿ<br>(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 17.02.2022 |
| ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಜಾರಿಯಲ್ಲಿರುವ ಟೋಯಿಂಗ್ ವ್ಯವಸ್ಥೆ ಜಾರಿಗೊಳಿಸಲು ಸರ್ಕಾರ ರೂಪಿಸಿರುವ ನಿಯಮಗಳೇನು ; ಈ ನಿಯಮಗಳು ರಾಜ್ಯದ ಯಾವ ಯಾವ ನಗರಗಳಲ್ಲಿ ಜಾರಿಯಲ್ಲಿವೆ ; (ಆದೇಶ ಸಹಿತ ವಿವರ ನೀಡುವುದು) | ರಾಜ್ಯದಲ್ಲಿ ಜಾರಿ ಇರುವ ಟೋಯಿಂಗ್ ವ್ಯವಸ್ಥೆಯ ಕುರಿತು ಟೋಯಿಂಗ್ ವಾಹನಗಳ ಕಾರ್ಯಾಚರಣೆ ವೇಳೆ ಅನುಸರಿಸಬೇಕಾದ ಗುಣಮಟ್ಟದ ನಿರ್ವಹಣಾ ವಿಧಾನಗಳ ಕುರಿತು ಪೊಲೀಸ್ ಇಲಾಖಾವತಿಯಿಂದ ಎಸ್.ಓ.ಪಿ. ಯನ್ನು (Standard Operating Procedure) ಹೊರಡಿಸಿದ್ದು, ಸದರಿ ಎಸ್.ಓ.ಪಿ. ಯನ್ನು <u>ಅನುಬಂಧ-1</u>ರಲ್ಲಿ ಲಗತ್ತಿಸಲಾಗಿದೆ.<br>ಹಾಗೂ ಬೆಂಗಳೂರು ನಗರದಲ್ಲಿ ಟೋಯಿಂಗ್ ವಾಹನಗಳ ಕಾರ್ಯಾಚರಣೆ ಕುರಿತು ಹೊರಡಿಸಿರುವ ಸುತ್ತೋಲೆ-125(ಎ) ಪರಿಷ್ಕೃತ ಪ್ರತಿಯನ್ನು <u>ಅನುಬಂಧ-2</u>ರಲ್ಲಿ ಲಗತ್ತಿಸಲಾಗಿದೆ.<br>ಈ ಕೆಳಕಂಡ ನಗರ/ಜಿಲ್ಲೆಗಳಲ್ಲಿ ಟೋಯಿಂಗ್ ವಾಹನಗಳ ವ್ಯವಸ್ಥೆಯು ಜಾರಿಯಲ್ಲಿರುತ್ತದೆ.<br><br>1. <u>ಬೆಂಗಳೂರು ನಗರ (ಖಾಸಗಿ ಟೋಯಿಂಗ್ ವಾಹನ) :</u><br>ಸರ್ಕಾರವು ಅಧಿಸೂಚನೆ ಸಂಖ್ಯೆ: ಹೆಚ್‌ಡಿ 330 ಎಸ್‌ಎಸ್‌ಟಿ 2016, ದಿನಾಂಕ:20.09.2016 ರಲ್ಲಿ ಬೆಂಗಳೂರು ನಗರಕ್ಕೆ ಖಾಸಗಿ ಟೋಯಿಂಗ್ ವ್ಯವಸ್ಥೆಯನ್ನು ಮಂಜೂರು ಮಾಡಿದ್ದು, ಟೋ ಮಾಡಲಾದ ವಾಹನದ ಚಾಲಕ/ಮಾಲೀಕರಿಂದ ವಾಹನಗಳ ವಿಧದ ಆಧಾರದ ಮೇರೆಗೆ (Type of vehicles) ವಸೂಲಾತಿ ಮಾಡಬೇಕಾದ ದಂಡ ಮೊತ್ತದ ದರವನ್ನು ಮತ್ತು ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರಗಳನ್ನು ನಿಗದಿಪಡಿಸಿ ಅಧಿಸೂಚನೆಯನ್ನು ಹೊರಡಿಸಿದ್ದು, ಅನುಬಂಧ – 3 ರಲ್ಲಿ ಲಗತ್ತಿಸಿದೆ.<br>2. <u>ಮೈಸೂರು ನಗರ (ಖಾಸಗಿ ಟೋಯಿಂಗ್ ವಾಹನ), ಹುಬ್ಬಳ್ಳಿ-ಧಾರವಾಡ ನಗರ (ಖಾಸಗಿ ಟೋಯಿಂಗ್ ವಾಹನ), ಮಂಗಳೂರು ನಗರ (ಖಾಸಗಿ ಟೋಯಿಂಗ್ ವಾಹನ), ಬೆಳಗಾವಿ ನಗರ (ಖಾಸಗಿ ಟೋಯಿಂಗ್ ವಾಹನ) :</u><br>ಸರ್ಕಾರವು ಅಧಿಸೂಚನೆ ಸಂಖ್ಯೆ:ಹೆಚ್‌ಡಿ 185 ಎಸ್‌ಎಸ್‌ಟಿ 2018, ದಿನಾಂಕ:03.03.2018 ರಲ್ಲಿ ಮೈಸೂರು ನಗರ, ಹುಬ್ಬಳ್ಳಿ- |

| | | |
|---|---|---|
| | | ಧಾರವಾಡ ನಗರ, ಮಂಗಳೂರು ನಗರ ಮತ್ತು ಬೆಳಗಾವಿ ನಗರಗಳಿಗೆ ಖಾಸಗಿ ಟೋಯಿಂಗ್ ವ್ಯವಸ್ಥೆಯನ್ನು ಮಂಜೂರು ಮಾಡಿದ್ದು, ಟೋ ಮಾಡಲಾದ ವಾಹನದ ಚಾಲಕ/ಮಾಲೀಕರಿಂದ ವಾಹನಗಳ ವಿಧದ ಆಧಾರದ ಮೇರೆಗೆ (Type of vehicles) ವಸೂಲಾತಿ ಮಾಡಬೇಕಾದ ದಂಡ ಮೊತ್ತದ ದರವನ್ನು ಮತ್ತು ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರಗಳನ್ನು ನಿಗದಿಪಡಿಸಿ ಅಧಿಸೂಚನೆಯನ್ನು ಹೊರಡಿಸಿದ್ದು, ಸದರಿ ಅಧಿಸೂಚನೆಯನ್ನು <u>ಅನುಬಂಧ-4</u>ರಲ್ಲಿ ಲಗತ್ತಿಸಲಾಗಿದೆ.<br><br>3. <u>ತುಮಕೂರು ಜಿಲ್ಲೆ (ಖಾಸಗಿ ಟೋಯಿಂಗ್ ವಾಹನ)</u> :<br>ಸರ್ಕಾರವು ಆದೇಶ ಸಂಖ್ಯೆ:ಹೆಚ್‌ಡಿ 314 ಎಎಸ್‌ಟಿ 2012, ದಿನಾಂಕ:07.09.2012ರಲ್ಲಿ ಖಾಸಗಿ ಟೋಯಿಂಗ್ ವ್ಯವಸ್ಥೆಯನ್ನು ಮಂಜೂರು ಮಾಡಿದ್ದು, ಟೋ ಮಾಡಲಾದ ವಾಹನದ ಚಾಲಕ/ಮಾಲೀಕರಿಂದ ವಾಹನಗಳ ವಿಧದ ಆಧಾರದ ಮೇರೆಗೆ (Type of vehicles) ವಸೂಲಾತಿ ಮಾಡಬೇಕಾದ ದಂಡ ಮೊತ್ತದ ದರವನ್ನು ಮತ್ತು ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರಗಳನ್ನು ನಿಗದಿಪಡಿಸಿ ಅಧಿಸೂಚನೆಯನ್ನು ಹೊರಡಿಸಿದ್ದು, ಸದರಿ ಅಧಿಸೂಚನೆಯನ್ನು <u>ಅನುಬಂಧ-5</u>ರಲ್ಲಿ ಲಗತ್ತಿಸಲಾಗಿದೆ.<br>4. <u>ದಾವಣಗೆರೆ ಜಿಲ್ಲೆ (ಸರ್ಕಾರಿ ಟೋಯಿಂಗ್ ವಾಹನ)</u> :<br>ದಾವಣಗೆರೆ ಜಿಲ್ಲಾ ಪೊಲೀಸ್ ಘಟಕಕ್ಕೆ ದಾವಣಗೆರೆ ಜಿಲ್ಲಾಧಿಕಾರಿಗಳು ಸರ್ಕಾರದ ಅನುದಾನದಲ್ಲಿ 2002ರಲ್ಲಿ 1 ವಾಹನವನ್ನು ಮತ್ತು 2010ರಲ್ಲಿ 1 ವಾಹನವನ್ನು ಖರೀದಿಸಿ ಒದಗಿಸಿದ್ದು (<u>ಅನುಬಂಧ-6&7</u>) ಸದರಿ ವಾಹನಗಳನ್ನು ದಾವಣಗೆರೆ ನಗರ ವ್ಯಾಪ್ತಿಯಲ್ಲಿ ಉಪಯೋಗಿಸುತ್ತಿದ್ದು, ವಾಹನ ಸವಾರರು ರಸ್ತೆಗಳಲ್ಲಿ ಅಸ್ತವ್ಯಸ್ಥ ಮತ್ತು ಅಸಮರ್ಪಕವಾಗಿ ನಿಷೇಧಿತ/ನಿರ್ಬಂಧಿತ ಸ್ಥಳಗಳಲ್ಲಿ ನಿಲ್ಲಿಸುವ ಹಾಗೂ ಸುಗಮ ಸಂಚಾರ ವ್ಯವಸ್ಥೆಗೆ ಅಡಚಣೆಯನ್ನುಂಟು ಮಾಡುವತಂಹ ವಾಹನಗಳನ್ನು ಟೋ ಮಾಡಲು ಸಂಚಾರ ಪೊಲೀಸ್ ವತಿಯಿಂದ ವಾಹನ ಚಾಲಕ/ಮಾಲೀಕರಿಂದ ನೋ ಪಾರ್ಕಿಂಗ್ ಶುಲ್ಕವನ್ನು ಮಾತ್ರ ವಿಧಿಸಿ ಸಂಗ್ರಹಿಸಲಾದ ದಂಡ ಮೊತ್ತವನ್ನು ಸಂಪೂರ್ಣವಾಗಿ ಸರ್ಕಾರಕ್ಕೆ ಜಮಾ ಮಾಡಲಾಗುತ್ತಿದೆ.<br><br>5. <u>ಚಿತ್ರದುರ್ಗ ಜಿಲ್ಲೆ (ಸರ್ಕಾರಿ ಟೋಯಿಂಗ್ ವಾಹನ)</u> :<br>ಚಿತ್ರದುರ್ಗ ಜಿಲ್ಲಾ ಪೊಲೀಸ್ ಘಟಕಕ್ಕೆ ಚಿತ್ರದುರ್ಗ ಜಿಲ್ಲಾಧಿಕಾರಿಗಳು ಸರ್ಕಾರದ ಅನುದಾನದಲ್ಲಿ 1 ವಾಹನವನ್ನು |

| | | |
|---|---|---|
| | | 2009ರಲ್ಲಿ ಖರೀದಿಸಿ ಒದಗಿಸಿದ್ದು, (ಅನುಬಂಧ-8) ಸದರಿ ವಾಹನವನ್ನು ಚಿತ್ರದುರ್ಗ ನಗರ ವ್ಯಾಪ್ತಿಯಲ್ಲಿ ಉಪಯೋಗಿಸುತ್ತಿದ್ದು, ವಾಹನ ಸವಾರರು ರಸ್ತೆಗಳಲ್ಲಿ ಅಸ್ತವ್ಯಸ್ಥ ಮತ್ತು ಅಸಮರ್ಪಕವಾಗಿ ನಿಷೇಧಿತ/ನಿರ್ಬಂಧಿತ ಸ್ಥಳಗಳಲ್ಲಿ ನಿಲ್ಲಿಸುವ ಹಾಗೂ ಸುಗಮ ಸಂಚಾರ ವ್ಯವಸ್ಥೆಗೆ ಅಡಚಣೆಯನ್ನುಂಟು ಮಾಡುವಂತಹ ವಾಹನಗಳನ್ನು ಟೋ ಮಾಡಲು ಸಂಚಾರ ಪೊಲೀಸ್ ವತಿಯಿಂದ ವಾಹನ ಚಾಲಕ/ಮಾಲೀಕರಿಂದ ನೋ ಪಾರ್ಕಿಂಗ್ ಶುಲ್ಕವನ್ನು ಮಾತ್ರ ವಿಧಿಸಿ ಸಂಗ್ರಹಿಸಲಾದ ದಂಡ ಮೊತ್ತವನ್ನು ಸಂಪೂರ್ಣವಾಗಿ ಸರ್ಕಾರಕ್ಕೆ ಜಮಾ ಮಾಡಲಾಗುತ್ತಿದೆ.<br>**6. ರಾಯಚೂರು ಜಿಲ್ಲೆ (ಸರ್ಕಾರಿ ಟೋಯಿಂಗ್ ವಾಹನ) :**<br>ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ ರವರು ಸರ್ಕಾರದ ಅನುದಾನದಲ್ಲಿ 1 ವಾಹನವನ್ನು 2004ರಲ್ಲಿ ಖರೀದಿಸಿದ್ದು, (ಅನುಬಂಧ-9) ಸದರಿ ವಾಹನವನ್ನು ರಾಯಚೂರು ನಗರ ವ್ಯಾಪ್ತಿಯಲ್ಲಿ ವಾಹನ ಸವಾರರು ರಸ್ತೆಗಳಲ್ಲಿ ಅಸ್ತವ್ಯಸ್ಥ ಮತ್ತು ಅಸಮರ್ಪಕವಾಗಿ ನಿಷೇಧಿತ/ನಿರ್ಬಂಧಿತ ಸ್ಥಳಗಳಲ್ಲಿ ನಿಲ್ಲಿಸುವ ಹಾಗೂ ಸುಗಮ ಸಂಚಾರ ವ್ಯವಸ್ಥೆಗೆ ಅಡಚಣೆಯನ್ನುಂಟು ಮಾಡುವತಂಹ ವಾಹನಗಳನ್ನು ಟೋ ಮಾಡಲು ಸಂಚಾರ ಪೊಲೀಸ್ ವತಿಯಿಂದ ವಾಹನ ಚಾಲಕ/ಮಾಲೀಕರಿಂದ ನೋ ಪಾರ್ಕಿಂಗ್ ಶುಲ್ಕವನ್ನು ಮಾತ್ರ ವಿಧಿಸಿ ಸಂಗ್ರಹಿಸಲಾದ ದಂಡ ಮೊತ್ತವನ್ನು ಸಂಪೂರ್ಣವಾಗಿ ಸರ್ಕಾರಕ್ಕೆ ಜಮಾ ಮಾಡಲಾಗುತ್ತಿದೆ.<br>**7. ಬಳ್ಳಾರಿ ಜಿಲ್ಲೆ (ಸರ್ಕಾರಿ ಟೋಯಿಂಗ್ ವಾಹನ) :**<br>ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ ರವರು ಸರ್ಕಾರದ ಅನುದಾನದಲ್ಲಿ 1 ವಾಹನವನ್ನು 2007ರಲ್ಲಿ ಖರೀದಿಸಿದ್ದು (ಅನುಬಂಧ-10) ಸದರಿ ವಾಹನವನ್ನು ಬಳ್ಳಾರಿ ನಗರ ವ್ಯಾಪ್ತಿಯಲ್ಲಿ ಉಪಯೋಗಿಸುತ್ತಿದ್ದು, ವಾಹನ ಸವಾರರು ರಸ್ತೆಗಳಲ್ಲಿ ಅಸ್ತವ್ಯಸ್ಥ ಮತ್ತು ಅಸಮರ್ಪಕವಾಗಿ ನಿಷೇಧಿತ/ನಿರ್ಬಂಧಿತ ಸ್ಥಳಗಳಲ್ಲಿ ನಿಲ್ಲಿಸುವ ಹಾಗೂ ಸುಗಮ ಸಂಚಾರ ವ್ಯವಸ್ಥೆಗೆ ಅಡಚಣೆಯನ್ನುಂಟು ಮಾಡುವತಂಹ ವಾಹನಗಳನ್ನು ಟೋ ಮಾಡಲು ಸಂಚಾರ ಪೊಲೀಸ್ ವತಿಯಿಂದ ವಾಹನ ಚಾಲಕ/ಮಾಲೀಕರಿಂದ ನೋ ಪಾರ್ಕಿಂಗ್ ಶುಲ್ಕವನ್ನು ಮಾತ್ರ ವಿಧಿಸಿ ಸಂಗ್ರಹಿಸಲಾದ ದಂಡ ಮೊತ್ತವನ್ನು ಸಂಪೂರ್ಣವಾಗಿ ಸರ್ಕಾರಕ್ಕೆ ಜಮಾ ಮಾಡಲಾಗುತ್ತಿದೆ. |
| (ಆ) | ಈ ಟೋಯಿಂಗ್ ವ್ಯವಸ್ಥೆಯನ್ನು ಸಂಪೂರ್ಣವಾಗಿ ಸರ್ಕಾರವೇ ನಿರ್ವಹಿಸುತ್ತಿದೆಯೇ ಅಥವಾ ಖಾಸಗಿ ಕಂಪನಿ/ವ್ಯಕ್ತಿಗಳಿಗೆ ನೀಡಲಾಗಿದೆಯೇ ; ಖಾಸಗಿಯವರಿಗೆ ನೀಡಿದ್ದಲ್ಲಿ, | ಬೆಂಗಳೂರು ನಗರ, ಮಂಗಳೂರು ನಗರ, ಬೆಳಗಾವಿ ನಗರಗಳಲ್ಲಿ ಮತ್ತು ತುಮಕೂರು ಜಿಲ್ಲೆಯಲ್ಲಿ ಟೋಯಿಂಗ್ ವಾಹನಗಳ ವ್ಯವಸ್ಥೆಯಿದ್ದು, ಸದರಿ ಟೋಯಿಂಗ್ ವಾಹನಗಳನ್ನು ಖಾಸಗಿ ಕಂಪನಿಯವರು ನಿರ್ವಹಿಸುತ್ತಿದ್ದಾರೆ.<br>ಸದರಿ ಟೋಯಿಂಗ್ ವಾಹನಗಳನ್ನು ನಿರ್ವಹಿಸುವ ಖಾಸಗಿ |

| | | |
|---|---|---|
| | ಇವರಿಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳೇನು ; ಈ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿರುವ ಕಂಪನಿ/ ವ್ಯಕ್ತಿಗಳ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು ; (ದಾಖಲೆಗಳ ಸಹಿತ ವಿವರ ನೀಡುವುದು) | ಕಂಪನಿಯವರಿಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳನ್ನು ಅನುಬಂಧ 11, 12, 13 & 14ರಲ್ಲಿ ಲಗತ್ತಿಸಿದೆ. ಸರ್ಕಾರದ ಹಾಗೂ ಖಾಸಗಿ ಸಂಸ್ಥೆಗಳ ವತಿಯಿಂದ ನಿರ್ವಹಿಸಲಾಗುತ್ತಿದೆ.<br>ಬೆಂಗಳೂರು ನಗರದಲ್ಲಿ ನಿಯಮ ಉಲ್ಲಂಘಿಸಿದ 34 ಖಾಸಗಿ ಟೋಯಿಂಗ್ ವಾಹನಗಳನ್ನು ದಿನಾಂಕ:18.10.2021 ರಿಂದ 30.11.2021ರವರೆಗೆ ಅಮಾನತ್ತಿನಲ್ಲಿಟ್ಟಿದ್ದು (ಅನುಬಂಧ 15) ಉಳಿದ ಘಟಕಗಳಾದ ಮಂಗಳೂರು ನಗರ, ಬೆಳಗಾವಿ ನಗರ, ತುಮಕೂರು ಜಿಲ್ಲೆಯಲ್ಲಿ ಟೋಯಿಂಗ್ ಕಂಪನಿಗಳ/ವ್ಯಕ್ತಿಗಳು ಯಾವುದೇ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿರುವ ಪ್ರಕರಣಗಳು ವರದಿಯಾಗಿರುವುದಿಲ್ಲ.<br>ಹಾಗೂ ಬೆಂಗಳೂರು ನಗರದಲ್ಲಿ ಹೊಸದಾಗಿ ರೂಪುರೇಷೆಗಳನ್ನು ತಯಾರಿಸಿ ಕಾರ್ಯರೂಪಕ್ಕೆ ತರುವವರೆಗೂ ಟೋಯಿಂಗ್ ವಾಹನಗಳ ಕಾರ್ಯಾಚರಣೆಯನ್ನು ದಿನಾಂಕ:31.01.2022 ರಿಂದ ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿರುತ್ತದೆ. ಮಂಗಳೂರು ನಗರ, ಬೆಳಗಾವಿ ನಗರ ಮತ್ತು ತುಮಕೂರು ಜಿಲ್ಲೆಯಲ್ಲಿ ಟೋಯಿಂಗ್ ವಾಹನಗಳು ಕಾರ್ಯಾಚರಣೆಯಲ್ಲಿರುತ್ತವೆ. |
| (ಇ) | ಕಳೆದ 3 ವರ್ಷಗಳಲ್ಲಿ ಟೋಯಿಂಗ್ ವ್ಯವಸ್ಥೆಯಿಂದ ವಸೂಲಾದ ದಂಡದ ಮೊತ್ತವೆಷ್ಟು ; ಇದರಲ್ಲಿ, ಸರ್ಕಾರಕ್ಕೆ ಸಂದಾಯವಾದ ಮೊತ್ತವೆಷ್ಟು ಮತ್ತು ಟೋಯಿಂಗ್ ವ್ಯವಸ್ಥೆಯನ್ನು ನಿರ್ವಹಿಸುತ್ತಿರುವ ಖಾಸಗಿ ಕಂಪನಿ/ವ್ಯಕ್ತಿಗಳಿಗೆ ಸಂದಾಯವಾದ ಮೊತ್ತವೆಷ್ಟು ; (ವರ್ಷವಾರು ಮತ್ತು ನಗರವಾರು ಮಾಹಿತಿಯನ್ನು ನೀಡುವುದು) | ಕಳೆದ 3 ವರ್ಷಗಳಲ್ಲಿ ಖಾಸಗಿ & ಸರ್ಕಾರಿ ಟೋಯಿಂಗ್ ವ್ಯವಸ್ಥೆಯಿಂದ ವಸೂಲಾದ ದಂಡ ಮೊತ್ತದ ವಿವರಗಳನ್ನು ಮತ್ತು ಸರ್ಕಾರಕ್ಕೆ ಸಂದಾಯ ಮಾಡಿದ ಮೊತ್ತದ ವಿವರಗಳನ್ನು ಹಾಗೂ ಟೋಯಿಂಗ್ ವ್ಯವಸ್ಥೆಯನ್ನು ನಿರ್ವಹಿಸುತ್ತಿರುವ ಖಾಸಗಿ ಕಂಪನಿ/ವ್ಯಕ್ತಿಗಳಿಗೆ ಸಂದಾಯ ಮಾಡಿರುವ ಮೊತ್ತದ ವಿವರಗಳು ಈ ಕೆಳಕಂಡಂತಿದ್ದು ಘಟಕವಾರು ವಿವರಗಳನ್ನು ಅನುಬಂಧ-16ರಲ್ಲಿ ಲಗತ್ತಿಸಿದೆ. |

| ವರ್ಷ | ಟೋಯಿಂಗ್ ವಾಹನದಿಂದ ವಸೂಲಾತಿ ಮಾಡಿದ ಒಟ್ಟು ದಂಡ ಮೊತ್ತ | ಸರ್ಕಾರಕ್ಕೆ ಸಂದಾಯ ಮಾಡಿದ ದಂಡ ಮೊತ್ತ | ಖಾಸಗಿ ಟೋಯಿಂಗ್ ಕಂಪನಿ/ವ್ಯಕ್ತಿಗಳಿಗೆ ಸಂದಾಯ ಮಾಡಿದ ದಂಡ ಮೊತ್ತ |
|---|---|---|---|
| 2019 | 10,21,93,301/- | 6,77,70,595/- | 3,44,22,706/- |
| 2020 | 5,56,51,250/- | 4,33,24,615/- | 1,23,26,635/- |
| 2021 | 8,69,60,920/- | 6,58,52,080/- | 2,11,08,840/- |
| 2022 (ಜನವರಿ ವರೆಗೆ) | 50,64,107/- | 35,57,396/- | 15,06,711/- |
| ಒಟ್ಟು | **24,98,69,578/-** | **18,05,04,686/-** | **6,93,64,892/-** |

| | | |
|---|---|---|
| (ಈ) | ಟೋಯಿಂಗ್ ವ್ಯವಸ್ಥೆಯ ಬಗ್ಗೆ ಸಾರ್ವಜನಿಕರಿಂದ ಸಾಕಷ್ಟು ದೂರುಗಳು ಬರುತ್ತಿದ್ದರೂ ಸಹ ಟೋಯಿಂಗ್ ಸಿಬ್ಬಂದಿಯಿಂದ ಸಾರ್ವಜನಿಕರಿಗೆ ಆಗುತ್ತಿರುವ ಕಿರುಕುಳವನ್ನು ತಪ್ಪಿಸಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದಲ್ಲಿ, ಇದಕ್ಕೆ ಸರ್ಕಾರವು ಕೈಗೊಂಡಿರುವ ಕ್ರಮಗಳೇನು ? (ಸಂಪೂರ್ಣ ವಿವರ ನೀಡುವುದು) | ಬಂದಿದೆ.<br>ಬೆಂಗಳೂರು ನಗರ ಸಂಚಾರ ವಿಭಾಗದಲ್ಲಿ ಟೋಯಿಂಗ್ ಸಿಬ್ಬಂದಿಯಿಂದ ಆಗುತ್ತಿರುವ ಕಿರುಕುಳವನ್ನು ತಪ್ಪಿಸಲು **ಟೋಯಿಂಗ್ ವಾಹನಗಳ ಪೂರ್ವ ನಿರ್ಧರಿತ ಕಾರ್ಯ ನಿರ್ವಹಣಾ** ವಿಧಾನ ಸುತ್ತೋಲೆ-125(ಎ) ಪರಿಷ್ಕೃತವನ್ನು ದಿನಾಂಕ:05.09.2021 ರಂದು ಹೊರಡಿಸಲಾಗಿರುತ್ತದೆ. ಸದರಿ ಸುತ್ತೋಲೆಯಲ್ಲಿ ಟೋಯಿಂಗ್ ವಾಹನಗಳ ಕಾರ್ಯ ವಿಧಾನ, ಠಾಣಾಧಿಕಾರಿಯ ಮತ್ತು ಟೋಯಿಂಗ್ ಕರ್ತವ್ಯದಲ್ಲಿರುವ ಅಧಿಕಾರಿಯ ಜವಾಬ್ದಾರಿಗಳು ಮತ್ತು ಪಾತ್ರ, ಟೋಯಿಂಗ್ ವಾಹನದಲ್ಲಿರಬೇಕಾದ ಪರಿಕರಗಳು, ಟೋಯಿಂಗ್ ಕಾರ್ಯಾಚರಣೆಗೂ ಮುನ್ನ ನಂತರ ಪಾಲಿಸಬೇಕಾದ ನಿಯಮಗಳು, ಟೋಯಿಂಗ್ ಯಾವಾಗ ಮತ್ತು ಎಲ್ಲಿ ಮಾಡಬೇಕು? ಟೋಯಿಂಗ್ ಸಿಬ್ಬಂದಿಗಳ ಕಾರ್ಯನಿರ್ವಹಣೆಯ ಕುರಿತು ಸಮಗ್ರವಾಗಿ ವಿವರಿಸಿ ಕಡ್ಡಾಯವಾಗಿ ಪಾಲನೆ ಮಾಡುವಂತೆ ಸೂಚಿಸಲಾಗಿದೆ. ಸುತ್ತೋಲೆಯ ಪ್ರತಿಯನ್ನು **ಅನುಬಂಧ-17** ರಲ್ಲಿ ಲಗತ್ತಿಸಿದೆ.<br>ನಿಯಮ ಉಲ್ಲಂಘಿಸಿದ 34 ಖಾಸಗಿ ಟೋಯಿಂಗ್ ವಾಹನಗಳನ್ನು ದಿನಾಂಕ:18.10.2021 ರಿಂದ ದಿನಾಂಕ:30.11.2021ರವರೆಗೆ ಅಮಾನತ್ತಿನಲ್ಲಿಡಲಾಗಿತ್ತು **(ಅನುಬಂಧ-18)**<br>ಬೆಂಗಳೂರು ನಗರ ಸಂಚಾರ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿ ಸಿಬ್ಬಂದಿಗಳಿಗೂ ಬಾಡಿವೋರ್ನ್ ಕ್ಯಾಮೆರಾಗಳನ್ನು ನೀಡಲು ಉದ್ದೇಶಿಸಲಾಗಿದ್ದು, ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ 1097 ಸಂಖ್ಯೆ ಬಾಡಿವೋರ್ನ್ ಕ್ಯಾಮೆರಾಗಳನ್ನು ಖರೀದಿಸಿ ಬೆಂಗಳೂರು ನಗರ ಸಂಚಾರ ವಿಭಾಗದ ವ್ಯಾಪ್ತಿಯ ಅಧಿಕಾರಿ ಸಿಬ್ಬಂದಿಗಳಿಗೆ ವಿತರಿಸಲಾಗುತ್ತಿದೆ. 1028 ಬಾಡಿವೋರ್ನ್ ಕ್ಯಾಮೆರಾಗಳನ್ನು ಖರೀದಿಸಲು ಕಾರ್ಯಾದೇಶವನ್ನು ನೀಡಲಾಗಿದ್ದು, ಸದರಿ ಬಾಡಿವೋರ್ನ್ ಕ್ಯಾಮೆರಾ ಲಭ್ಯವಾದ ನಂತರ ಅವುಗಳನ್ನು ಸಹ ಅಧಿಕಾರಿ ಸಿಬ್ಬಂದಿಗಳಿಗೆ ನೀಡಲಾಗುವುದು. |

**ಹೆಚ್‌ಡಿ 38 ಎಸ್‌ಎಸ್‌ಟಿ 2022**

(ಆರಗ ಜ್ಞಾನೇಂದ್ರ)
ಗೃಹ ಸಚಿವರು

78



6. ವಾಹನದ ವಾರಸುದಾರರಿಗೆ ಅರಿವಾಗದಂತೆ ವಾಹನವನ್ನು ಟೋ ಮಾಡಲಾದ ಅಧಿಕಾರಿ, ವಾಹನವನ್ನು ಎಲ್ಲಿ ಶೇಖರಿಸಲಾಗಿದೆ, ವಾರಸುದಾರರು ಯಾವ ಸ್ಥಳಕ್ಕೆ ಬಂದು ದಂಡವನ್ನು ಪಾವತಿಸಿ ವಾಹನವನ್ನು ವಾಪಸ್ಸ್ ಪಡೆಯಬಹುದು ಹಾಗೂ ಪೊಲೀಸ್ ಸ್ಟೇಷನ್ ವಿವರಗಳನ್ನು ಒಳಗೊಂಡ ಮಾಹಿತಿಯನ್ನು ಟೋ ಮಾಡಲಾದ ಸ್ಥಳದಲ್ಲಿ ಪ್ರಕಟಿಸುವುದು.
7. ಠಾಣಾ ವ್ಯಾಪ್ತಿಯಲ್ಲಿರುವ ವಾಹನಗಳ ನಿಲುಗಡೆ ಮತ್ತು ನಿಲುಗಡೆ ನಿಷೇಧದ ಸ್ಥಳಗಳ ಸಂಪೂರ್ಣ ಮಾಹಿತಿಯನ್ನು ಅಧಿಕಾರಿಯು ಹೊಂದಿರಬೇಕು.

<u>ಟೋಯಿಂಗ್ ದರಗಳು.</u>

ಕರ್ನಾಟಕ ಸರ್ಕಾರವು ಈ ಕೆಳಕಂಡಂತೆ ಟೋಯಿಂಗ್ ದರವನ್ನು ನಿಗದಿಪಡಿಸುತ್ತದೆ.

1. ನಗರ ಪ್ರದೇಶಗಳಾದ ಬೆಂಗಳೂರು, ಮೈಸೂರು, ಮಂಗಳೂರು, ಹುಬ್ಬಳ್ಳಿ-ಧಾರವಾಡ ಮತ್ತು ಬೆಳಗಾವಿ ನಗರ (ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 185 ಎಸ್‌ಎಸ್‌ಟಿ 2018, ದಿನಾಂಕ:03.03.2018 ಮತ್ತು ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 330 ಎಸ್‌ಎಸ್‌ಟಿ 2016, ದಿನಾಂಕ: 20.09.2016) ಗಳಗೆ ದರಗಳು ಈ ಕೆಳಕಂಡಂತಿವೆ.

| ವಾಹನಗಳ ವಿಧ | ಒಟ್ಟು ಟೋಯಿಂಗ್ ದರ | ಸರ್ಕಾರಕ್ಕೆ ಪಾವತಿಸಬೇಕಾದ ಮೊತ್ತ | ಖಾಸಗಿ ಟೋಯಿಂಗ್ ವಾಹನದ ಮಾಲೀಕರಿಗೆ ಕೊಡಬೇಕಾದ ಮೊತ್ತ |
|---|---|---|---|
| ದ್ವಿಚಕ್ರ ವಾಹನಗಳು | 650-00 | 325-00 | 325-00 |
| ಲಘು ಮೋಟಾರ್ ವಾಹನಗಳು | 1000-00 | 500-00 | 500-00 |
| ಮಧ್ಯಮ ಮೋಟಾರ್ ವಾಹನಗಳು | 1250-00 | 625-00 | 625-00 |
| ಭಾರಿ ಮೋಟಾರ್ ವಾಹನಗಳು | 1500-00 | 750-00 | 750-00 |

ಟೋ ಮಾಡಿದ ವಾಹನಕ್ಕೆ ಸಂಗ್ರಹಿಸುವ ಒಟ್ಟು ಶುಲ್ಕ (ಪಾರ್ಕಿಂಗ್ ಉಲ್ಲಂಘನೆ + ಟೋಯಿಂಗ್ ಚಾರ್ಜು)

| ವಾಹನಗಳ ವಿಧ | ಪಾರ್ಕಿಂಗ್ ಉಲ್ಲಂಘನೆ ದರ | ಟೋಯಿಂಗ್ ದರ | ಒಟ್ಟು |
|---|---|---|---|
| ದ್ವಿಚಕ್ರ ವಾಹನಗಳು | 100-00 | 650-00 | 750-00 |
| ಲಘು ಮೋಟಾರ್ ವಾಹನಗಳು | 100-00 | 1000-00 | 1100-00 |
| ಮಧ್ಯಮ ಮೋಟಾರ್ ವಾಹನಗಳು | 100-00 | 1250-00 | 1350-00 |
| ಭಾರಿ ಮೋಟಾರ್ ವಾಹನಗಳು | 100-00 | 1500-00 | 1600-00 |

2. ಕರ್ನಾಟಕದ ಇತರ ಎಲ್ಲಾ ಜಿಲ್ಲೆಗಳಿಗೆ:-
(ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 314 ಎಸ್‌ಎಸ್‌ಟಿ 2012, ದಿನಾಂಕ:07.09.2012) ಈ ಕೆಳಕಂಡಂತೆ ಟೋಯಿಂಗ್ ದರಗಳನ್ನು ವಿಧಿಸಲಾಗಿರುತ್ತದೆ.

| ವಾಹನಗಳ ವಿಧ | ಒಟ್ಟು ಟೋಯಿಂಗ್ ದರ | ಸರ್ಕಾರಕ್ಕೆ ಪಾವತಿಸಬೇಕಾದ ಮೊತ್ತ | ಖಾಸಗಿ ಟೋಯಿಂಗ್ ವಾಹನದ ಮಾಲೀಕರಿಗೆ ಕೊಡಬೇಕಾದ ಮೊತ್ತ |
|---|---|---|---|
| ದ್ವಿಚಕ್ರ ವಾಹನಗಳು | 200 | 100 | 100 |
| ಲಘು ಮೋಟಾರ್ ವಾಹನಗಳು | 300 | 150 | 150 |
| ಮಧ್ಯಮ ಮೋಟಾರ್ ವಾಹನಗಳು | 400 | 225 | 175 |
| ಭಾರಿ ಮೋಟಾರ್ ವಾಹನಗಳು | 500 | 300 | 200 |

ಟೋ ಮಾಡಿದ ವಾಹನಕ್ಕೆ ಸಂಗ್ರಹಿಸುವ ಒಟ್ಟು ಶುಲ್ಕ (ಪಾರ್ಕಿಂಗ್ ಉಲ್ಲಂಘನೆ + ಟೋಯಿಂಗ್ ಚಾರ್ಜ್)

| ವಾಹನಗಳ ವಿಧ | ಪಾರ್ಕಿಂಗ್ ಉಲ್ಲಂಘನೆ ದರ | ಟೋಯಿಂಗ್ ದರ | ಒಟ್ಟು |
|---|---|---|---|
| ದ್ವಿಚಕ್ರ ವಾಹನಗಳು | 100 | 100 | 200 |
| ಲಘು ಮೋಟಾರ್ ವಾಹನಗಳು | 100 | 200 | 300 |
| ಮಧ್ಯಮ ಮೋಟಾರ್ ವಾಹನಗಳು | 100 | 300 | 400 |
| ಭಾರಿ ಮೋಟಾರ್ ವಾಹನಗಳು | 100 | 400 | 500 |

<u>ಟೋಯಿಂಗ್ ಕಾರ್ಯಾಚರಣೆ ವೇಳೆ (ಉಸ್ತುವಾರಿ ಅಧಿಕಾರಿ ಮತ್ತು ಟೋಯಿಂಗ್ ಸಿಬ್ಬಂದಿ) ಶಿಷ್ಟಾಚಾರದ ವರ್ತನೆಗಳು.</u>

ಅ) ಕಾರ್ಯಾಚರಣೆ ವೇಳೆ ಉಸ್ತುವಾರಿ ಅಧಿಕಾರಿ ಮತ್ತು ಸಿಬ್ಬಂದಿ ದೃಢವಾಗಿ ಮತ್ತು ಸುಸಂಸ್ಕೃತವಾಗಿ ನಡೆದುಕೊಂಡು ವಾಹನವನ್ನು ಎಳೆದೊಯ್ಯುವ ಮೊದಲು ನಿಯಮ ಉಲ್ಲಂಘನೆ ಬಗ್ಗೆ ಹಾಗೂ ಕಾನೂನು ಕ್ರಮ ಜರುಗಿಸುವ ಬಗ್ಗೆ ವಾಹನದ ವಾರಸುದಾರರಿಗೆ ಶಾಂತವಾಗಿ ಮನದಟ್ಟು ಮಾಡಿಕೊಡುವುದು.

ಆ) ಟೋಯಿಂಗ್ ಸಿಬ್ಬಂದಿಯು ಕರ್ತವ್ಯದ ಸಮಯದಲ್ಲಿ ಕಡ್ಡಾಯವಾಗಿ ನೌಕಾನೀಲಿ (Navy blue) ಬಣ್ಣದ ಸಮವಸ್ತ್ರವನ್ನು ಧರಿಸಿರಬೇಕು. ಸಮವಸ್ತ್ರದ ಮೇಲೆ ಹೆಸರಿನ ಫಲಕವನ್ನು ಪ್ರದರ್ಶಿಸಬೇಕು. ಕಾರ್ಯಾಚರಣೆ ನಡೆಸುವಾಗ ಸಂಜೆಯ ವೇಳೆ ಟೋಯಿಂಗ್ ಸಿಬ್ಬಂದಿಯು ರಿಫ್ಲೆಕ್ಟೀವ್ ಜಾಕೆಟ್‌ಗಳನ್ನು ಧರಿಸಿರಬೇಕು.

ಇ) ಉಲ್ಲಂಘನೆದಾರರು ಕೇಳಿದಾಗ ಪೊಲೀಸ್ ಸ್ಟೇಷನ್ ವಿವಿರ, ಟೋಯಿಂಗ್ ದರ, ಪಾರ್ಕಿಂಗ್ ಉಲ್ಲಂಘನೆ ದರ, ಕಾನೂನು ಪ್ರಕ್ರಿಯೆ ಮತ್ತು ಪೊಲೀಸ್ ನೋಟೀಸ್‌ನ ವಿಲೇವಾರಿ ಬಗ್ಗೆ ಸಂಪೂರ್ಣ ವಿವರಗಳನ್ನು ಉಸ್ತುವಾರಿ ಅಧಿಕಾರಿಯು ಶಾಂತವಾಗಿ ಒದಗಿಸಬೇಕು.

ಈ) ಉಲ್ಲಂಘನೆದಾರರೊಂದಿಗೆ ಉಸ್ತುವಾರಿ ಅಧಿಕಾರಿ ಮಾತ್ರ ಸಂಭಾಷಿಸುವುದು, ಯಾವುದೇ ಸಂದರ್ಭಗಳಲ್ಲಿ ಟೋಯಿಂಗ್ ಸಿಬ್ಬಂದಿ ಉಲ್ಲಂಘನೆದಾರರೊಂದಿಗೆ/ವಾಹನದ ಮಾಲೀಕರೊಂದಿಗೆ ಸಂಭಾಷಿಸಬಾರದು.

ಮೇಲ್ಕಂಡ ಸೂಚನೆಗಳನ್ನು ರಾಜ್ಯದ ಎಲ್ಲಾ ಸಂಚಾರಿ ಅಧಿಕಾರಿಗಳು ಸರಿಯಾಗಿ ಪಾಲಿಸುವುದು. ಘಟಕಾಧಿಕಾರಿಗಳು ಮತ್ತು ಇತರ ಮೇಲ್ವಿಚಾರಕ ಅಧಿಕಾರಿಗಳು ತಮ್ಮ ಎಲ್ಲಾ ಸಂಚಾರಿ ಅಧಿಕಾರಿಗಳಿಗೆ ವಾಹನಗಳ ಟೋಯಿಂಗ್‌ಅನ್ನು ಸಂವೇದನೆಯಿಂದ ಮತ್ತು ಪಾರದರ್ಶಕ ರೀತಿಯಲ್ಲಿ ಮಾಡುವಂತೆ ಸೂಚಿಸಲಾಗಿದೆ.

(ನೀಲಮಣಿ ಎನ್. ರಾಜು)
ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್
ಜನರಲ್ ಆಫ್ ಪೊಲೀಸ್, ಕರ್ನಾಟಕರಾಜ್ಯ,
ಬೆಂಗಳೂರು.

ಗೆ,
1. ಎಲ್ಲಾ ಪೊಲೀಸ್ ಆಯುಕ್ತರು ರವರುಗಳಿಗೆ
2. ಅಪರ ಪೊಲೀಸ್ ಆಯುಕ್ತರು, ಸಂಚಾರ ಮತ್ತು ಭದ್ರತೆ, ಬೆಂಗಳೂರು ನಗರ ರವರಿಗೆ,
3. ಎಲ್ಲಾ ಪೊಲೀಸ್ ಮಹಾ ನಿರೀಕ್ಷಕರು, ವಲಯಾಧಿಕಾರಿಗಳು ರವರಿಗೆ
4. ಎಲ್ಲಾ ಜಿಲ್ಲಾ ಪೊಲೀಸ್ ಅಧೀಕ್ಷಕರು ರವರುಗಳಿಗೆ.




ಜಂಟಿ ಪೊಲೀಸ್ ಆಯುಕ್ತರವರ ಕಛೇರಿ,
ಸಂಚಾರ ವಿಭಾಗ, ನಂ.5, ಇನ್‌ಫೆಂಟ್ರಿ ರಸ್ತೆ,
ಬೆಂಗಳೂರು ನಗರ,
ದಿನಾಂಕ: ನೇ ಸೆಪ್ಟಂಬರ್ 2021

## ಸು ತ್ತೋ ಲೆ – 125(ಎ) ಪರಿಷ್ಕೃತ

## ಟೋಯಿಂಗ್ ವಾಹನಗಳ ಪೂರ್ವ ನಿರ್ಧರಿತ ಕಾರ್ಯನಿರ್ವಹಣಾ ವಿಧಾನ.

## (Standard Operating Procedure)

ವಿಷಯ:– ಟೋಯಿಂಗ್ ವಾಹನಗಳ ಕಾರ್ಯಾಚರಣೆ ವೇಳೆ ಅನುಸರಿಸಬೇಕಾದ ನಿರ್ಧರಿತ ಕಾರ್ಯ ನಿರ್ವಹಣಾ ವಿಧಾನಗಳು – (Standard Operating Procedure (SOP) - ಪರಿಷ್ಕೃತ ಸುತ್ತೋಲೆ.

*******

ಬೆಂಗಳೂರು ನಗರದಲ್ಲಿ ವಾಹನಗಳು/ಪಾದಚಾರಿಗಳ ಸುಗಮ ಸಂಚಾರಕ್ಕೆ ಅಡಚಣೆಯಾಗುವಂತೆ (ಪ್ರದೇಶಗಳ ಪ್ರವೇಶಕ್ಕೆ ಅಡ್ಡಿ, ವಾಹನ ನಿಲುಗಡೆ ನಿಷೇಧ ಪ್ರದೇಶಗಳಲ್ಲಿ ನಿಲುಗಡೆ, ತಪ್ಪು ನಿಲುಗಡೆ, ಪಾದಚಾರಿ ದಾಟುವಿಕೆ, ಪಾದಚಾರಿ ರಸ್ತೆಯಲ್ಲಿ ನಿಲುಗಡೆ ಹಾಗೂ ಡಬಲ್ ಪಾರ್ಕಿಂಗ್ ಇತ್ಯಾದಿ) ಸಂಚಾರ ನಿಲುಗಡೆ ನಿಯಮಗಳನ್ನು ಉಲ್ಲಂಘಿಸುವ ವಿವಿಧ ರೀತಿಯ ವಾಹನಗಳನ್ನು ಸಾಗಿಸಲು ಹುಕ್ ಮತ್ತು ಚೈನ್ ವಿಧಾನ ಅಥವಾ ಚಕ್ರಗಳಿಂದ ಎತ್ತುವ ವಿಧಾನವನ್ನು ಒಳಗೊಂಡ ಟೋಯಿಂಗ್ ವಾಹನಗಳನ್ನು ಉಪಯೋಗಿಸಲಾಗುತ್ತಿದೆ.

### ಸಂಚಾರ ಪೊಲೀಸರು ವಾಹನಗಳನ್ನು ಟೋ ಮಾಡಲು ಅಧಿಕಾರವನ್ನು ಪ್ರದತ್ತ ಮಾಡುವ ಕಾನೂನು

**ಸಂಬಂಧಿಸಿದ ಕಲಂ: ಭಾರತೀಯ ಮೋಟಾರ್ ವಾಹನ ಕಾಯ್ದೆ ಕಲಂ 122.**

ಕಲಂ 122: ಅಪಾಯಕಾರಿ ರೀತಿಯಲ್ಲಿ ವಾಹನವನ್ನು ನಿಲ್ಲಿಸುವುದು: ರಸ್ತೆಯ ಇತರೆ ಬಳಕೆದಾರರಿಗೆ ಅಪಾಯ, ಅಡಚಣೆ ಅಥವಾ ಅನಗತ್ಯ ಅನಾನುಕೂಲತೆ ಉಂಟು ಮಾಡುವ ಹಾಗೂ ಅಂತಹ ಸಾಧ್ಯತೆಯಿರುವ ರೀತಿಯಲ್ಲಿ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ವಾಹನವನ್ನು ನಿಲ್ಲಿಸಿ ಹೋಗುವುದು ಸಂಚಾರ ನಿಯಮದ ಉಲ್ಲಂಘನೆಯಾಗಿರುತ್ತದೆ. ಅಂತಹ ವಾಹನಗಳನ್ನು ಪೊಲೀಸರು ಎಳೆದೊಯ್ಯಬಹುದು ಮತ್ತು ಹೀಗೆ ಎಳೆಯುವುದಕ್ಕೆ ತಗಲುವ ಶುಲ್ಕವನ್ನು ಹಾಗೂ ಆ ವಾಹನಗಳ ಸಂಚಾರ ನಿಯಮಗಳ ಉಲ್ಲಂಘನೆಗೆ ದಂಡವನ್ನು ವಿಧಿಸಬಹುದು.

**ಕಲಂ 127: ಸಾರ್ವಜನಿಕ ಸ್ಥಳದಲ್ಲಿ ಪರಿತ್ಯಕ್ತವಾಗಿ ಅಥವಾ ಉಪೇಕ್ಷಿತವಾಗಿ ಬಿಟ್ಟಿರುವ ಮೋಟಾರ್ ವಾಹನಗಳನ್ನು ತೆಗೆಯುವುದು.**

(1) ವಾಹನವನ್ನು ಸಾರ್ವಜನಿಕ ಸ್ಥಳದಲ್ಲಿ 10 ಗಂಟೆಗಳಿಗೂ ಹೆಚ್ಚು ಕಾಲ ಹಾಗೇ ಬಿಟ್ಟು ಹೋಗಿದ್ದರೆ ಅಥವಾ ನಿಲುಗಡೆ ಮಾಡಬಾರದು ಎಂದಿದ್ದ ಸ್ಥಳದಲ್ಲಿ ನಿಲ್ಲಿಸಿದ್ದರೆ ಸಮವಸ್ತ್ರದಲ್ಲಿರುವ ಆ ಪ್ರದೇಶದ ಪೊಲೀಸ್ ಅಧಿಕಾರಿಯು ಅದನ್ನು ಎಳೆದೊಯ್ಯುವಂತೆ ಆಜ್ಞೆ ಮಾಡಬಹುದು.

(2) ಸಂಚಾರಕ್ಕೆ ಅಡಚಣೆ ಉಂಟು ಮಾಡುವ ರೀತಿಯಲ್ಲಿ ವಾಹನವನ್ನು ಹಾಗೆಯೇ ಬಿಟ್ಟು ಹೋಗಿದ್ದರೆ ಆ ಪ್ರದೇಶದ ಪೊಲೀಸ್ ಅಧಿಕಾರಿಯ ಆಜ್ಞೆಯ ಮೇರಗೆ ತಕ್ಷಣವೇ ಅದನ್ನು ಎಳೆದೊಯ್ಯುವ ಮೂಲಕ ಅಲ್ಲಿಂದ ತೆಗೆಯಬಹುದು.

(3) ಎಳೆದೊಯ್ಯುವುದಕ್ಕೆ ತಗುಲುವ ಖರ್ಚನ್ನು ಉಲ್ಲಂಘನೆ ಮಾಡಿದ ವಾಹನ ಮಾಲೀಕನು ತೆರಬೇಕು ಇನ್ನಾವುದಾದರೂ ದಂಡ ವಿಧಿಸಿದ್ದರೆ ಅದನ್ನೂ ತೆರಬೇಕು.

**ಟೋಯಿಂಗ್ ವಾಹನಗಳ ತಾಂತ್ರಿಕ ನಿರ್ದಿಷ್ಟತೆ (2020 ರ ಟೆಂಡರ್ ದಾಖಲಾತಿಯಂತೆ)**

- ಟೋಯಿಂಗ್ ವಾಹನದ ಉದ್ದ 9.4 ಅಡಿ * ಅಗಲ 6.25 ಅಡಿ ಇರಬೇಕು.
- ಪವರ್ ಸ್ಟೇರಿಂಗ್ ಹೊಂದಿರುವ ಟೋಯಿಂಗ್ ವಾಹನವಾಗಿರಬೇಕು.
- 2800 ಎಂ.ಎಂ. ವ್ಹೀಲ್ ಗಾತ್ರದ ಕಾರುಗಳನ್ನು ಟೋ ಮಾಡುವ ಸಾಮರ್ಥ್ಯವನ್ನು ಹೊಂದಿರಬೇಕು.
- 2 ಟನ್ ತೂಕದ ವಾಹನಗಳನ್ನು ಹೊರುವ ಸಾಮರ್ಥ್ಯ ಇರಬೇಕು.
- ಸೆಲ್ಫ್ ಲೋಡಿಂಗ್ ವ್ಹೀಲ್ ಲಿಫ್ಟ್ ವ್ಯವಸ್ಥೆ ಇರಬೇಕು.
- ವಾಹನದ ಮುಂಭಾಗದ ಚಕ್ರಗಳಲ್ಲಿ ಹೈಡ್ರಾಲಿಕ್ ತಾಂತ್ರಿಕ ವ್ಯವಸ್ಥೆ ಇರಬೇಕು.

**ಟೋಯಿಂಗ್ ವಾಹನಗಳ ಪೂರ್ವ ನಿರ್ಧರಿತ ಕಾರ್ಯನಿರ್ವಹಣಾ ವಿಧಾನವನ್ನು ಕೆಳಕಂಡಂತೆ ವಿಂಗಡಿಸಲಾಗಿದೆ.**

- ಸಂಚಾರ ವಿಭಾಗದ ಪೊಲೀಸ್ ಠಾಣೆಯ ಪೊಲೀಸ್ ಇನ್ಸ್‌ಪೆಕ್ಟರ್‌ಗಳು ಕೈಗೊಳ್ಳಬೇಕಾದ/ಅನುಸರಿಸಬೇಕಾದ ಕ್ರಮಗಳು
- ಟೋಯಿಂಗ್ ವಾಹನಗಳ ಪ್ರಭಾರ ವಹಿಸಿರುವ ಎ.ಎಸ್.ಐ/ಪಿ.ಎಸ್.ಐ ಅನುಸರಿಸಬೇಕಾದ ಕ್ರಮಗಳು.
- ಟೋಯಿಂಗ್ ಸಿಬ್ಬಂದಿಗಳ ಕಾರ್ಯನಿರ್ವಹಣೆ.

<u>ಸಂಚಾರ ಪೊಲೀಸ್ ಇನ್ಸ್‌ಪೆಕ್ಟರ್(ಠಾಣಾಧಿಕಾರಿಯು) ಕೈಗೊಳ್ಳಬೇಕಾದ/ಅನುಸರಿಸಬೇಕಾದ ಕ್ರಮಗಳು</u>

- ಠಾಣೆಗೆ ಹಂಚಿಕೆಯಾಗಿರುವ ಟೋಯಿಂಗ್ ವಾಹನ, ಸಿಬ್ಬಂದಿಗಳು ಹಾಗೂ ಮಾಲೀಕರು ಬಂದು ವರದಿ ಮಾಡಿಕೊಂಡಿರುವ ಬಗ್ಗೆ ಪರಿಶೀಲಿಸುವುದು

- ಟೋಯಿಂಗ್ ವಾಹನಕ್ಕೆ ಹಂಚಿಕೆ ಮಾಡಿರುವ ಸಿಬ್ಬಂದಿಗಳ ವಿವರಗಳನ್ನು ಪರಿಶೀಲಿಸಿ ರಿಜಿಸ್ಟರ್‌ನಲ್ಲಿ ನಮೂದಿಸುವುದು.
- ಹಂಚಿಕೆಯಾಗಿರುವ ಟೋಯಿಂಗ್ ವಾಹನವು ಟೆಂಡರ್ ನಿಯಮದ ಪ್ರಕಾರ ಎಲ್ಲಾ ಉಪಕರಣಗಳನ್ನು/ದಾಖಲಾತಿಗಳನ್ನು ಹೊಂದಿರುವ ಬಗ್ಗೆ ಪರಿಶೀಲಿಸುವುದು.
- ವಾಹನ ಸುಸ್ಥಿತಿಯಲ್ಲಿದೆಯೇ? ಹೈಡ್ರಾಲಿಕ್ ಸಿಸ್ಟಮ್ ಕಾರ್ಯನಿರ್ವಹಿಸುತ್ತಿದೆಯೇ? ಮುಂತಾದ ವಿವರಗಳನ್ನು ಪರಿಶೀಲಿಸುವುದು
- ಟೋಯಿಂಗ್ ವಾಹನದ ಉಸ್ತುವಾರಿಯಾಗಿ ಕನಿಷ್ಠ ಎ.ಎಸ್.ಐ ದರ್ಜೆಯ ಅಧಿಕಾರಿಯನ್ನು ನೇಮಕ ಮಾಡುವುದು ಹಾಗೂ ನೇಮಿಸಿರುವ ಅಧಿಕಾರಿ ಕಡ್ಡಾಯವಾಗಿ ಬಾಡಿವೋರ್ನ್ ಕ್ಯಾಮೆರಾ ಧರಿಸಿರುವ ಬಗ್ಗೆ ಪರಿಶೀಲಿಸುವುದು.
- ಟೋಯಿಂಗ್ ವಾಹನದಲ್ಲಿ ಠಾಣೆಯ ಹೆಸರು, ಟೋಯಿಂಗ್ ದರ, ಶೇಖರಣೆ ಮಾಡುವ ಸ್ಥಳದ ವಿವರಗಳನ್ನೊಳಗೊಂಡ ಮಾಹಿತಿಯ ತೂಗು ಹಾಕುವ ಬೋರ್ಡ್ ವಾಹನದ ಎರಡು ಭಾಗಗಳಲ್ಲಿ ಇರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳುವುದು.

| | | |
|---|---|---|
| ಸಂಚಾರ ಠಾಣೆಯ ಹೆಸರು | | |
| ದೂರುಗಳಿದ್ದಲ್ಲಿ ಸಂಪರ್ಕಿಸಬೇಕಾದ ಠಾಣಾಧಿಕಾರಿಯ ಮೊಬೈಲ್ ಸಂಖ್ಯೆ | 948080<br>0802294 | |
| ಟೋ ಮಾಡಲಾದ ವಾಹನ ಶೇಖರಣೆ ಮಾಡುವ ಸ್ಥಳ | | |
| **ವಾಹನದ ವಿಧ** | **ಟೋಯಿಂಗ್ ದರ (ಮೊದಲನೆ ಬಾರಿ ನೋ ಪಾರ್ಕಿಂಗ್ ಉಲ್ಲಂಘನೆ)** | **ನೋ ಪಾರ್ಕಿಂಗ್ ದರ (ಎರಡು ಅಥವಾ ಹೆಚ್ಚು ಬಾರಿ ನೋ ಪಾರ್ಕಿಂಗ್ ಉಲ್ಲಂಘನೆ)** |
| ದ್ವಿ ಚಕ್ರ ವಾಹನ | 1150 | 1650 |
| ಲಘು ವಾಹನ | 1500 | 2000 |
| ಮಧ್ಯಮವಾಹನ | 1750 | 2250 |
| ಭಾರೀ ವಾಹನ | 2000 | 2500 |

- ದೂರುಗಳಿದ್ದಲ್ಲಿ ಪಿ.ಐ. ರವರನ್ನು ಸಂಪರ್ಕಿಸಬಹುದಾದ ಮೊಬೈಲ್ ಸಂಖ್ಯೆಯು ನಮೂದಾಗಿರುವ ಬಗ್ಗೆಯೂ ಖಚಿತಪಡಿಸಿಕೊಳ್ಳುವುದು
- ಟೋಯಿಂಗ್ ಸಿಬ್ಬಂದಿಗಳು ಸಮವಸ್ತ್ರ, ಕಟಿಂಗ್, ಶೇವಿಂಗ್, ನಾಮಫಲಕ ಹಾಗೂ ಷೂ ಧರಿಸಿರುವ ಬಗ್ಗೆ ಪರಿಶೀಲನೆ ನಡೆಸುವುದು.
- ಟೋಯಿಂಗ್ ಉಸ್ತುವಾರಿ ಅಧಿಕಾರಿ ಹಾಗೂ ಸಿಬ್ಬಂದಿಗಳು ಸಾರ್ವಜನಿಕರೊಂದಿಗೆ ಸೌಜನ್ಯಯುತವಾಗಿ ವರ್ತಿಸುವ ಬಗ್ಗೆ ತಿಳುವಳಿಕೆ ನೀಡುವುದು.

- ಟೋ ಮಾಡಲಾದ ವಾಹನಗಳನ್ನು ಶೇಖರಿಸುವ ಜಾಗವು ಸಂಚಾರ ಠಾಣೆಯಿಂದ ದೂರವಿದ್ದಲ್ಲಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಮತ್ತೊಬ್ಬ ಎ.ಎಸ್.ಐ. ದರ್ಜೆಯ ಅಧಿಕಾರಿಯನ್ನು ನೇಮಿಸಿ ದಂಡ ಸಂಗ್ರಹಿಸಿ, ರಸೀದಿ ನೀಡಿ, ವಾಹನವನ್ನು ಬಿಡಲು ಕ್ರಮ ಕೈಗೊಳ್ಳುವುದು. ಎ.ಎಸ್.ಐಗಳ ಕೊರತೆಯಿದ್ದಲ್ಲಿ ಒಬ್ಬ ಸಂಚಾರ ವಿಭಾಗದ ಹೆಚ್.ಸಿ.ಯನ್ನು ಆ ಜಾಗದಲ್ಲಿ ನೇಮಿಸಿ ಉಲ್ಲಂಘನೆದಾರರಿಗೆ ದಂಡ ಪಾವತಿಸಲು ಅನುಕೂಲಮಾಡಿಕೊಡುವುದು.
- ವಾಹನಗಳನ್ನು ಶೇಖರಿಸುವ ಜಾಗವು ಠಾಣೆಯ ಪಕ್ಕದಲ್ಲೇ ಇದ್ದಲ್ಲಿ, ಅಂತಹ ಸ್ಥಳಗಳಲ್ಲಿ ಠಾಣೆಯಲ್ಲಿರುವ ಅಧಿಕಾರಿಗಳ ಮುಖಾಂತರ ದಂಡವನ್ನು ಸಂಗ್ರಹಿಸಿ ವಾಹನವನ್ನು ಬಿಡಲು ಕ್ರಮ ಕೈಗೊಳ್ಳುವುದು.
- ಯಾವುದೇ ಕಾರಣಕ್ಕೂ ಟೋಯಿಂಗ್ ದಂಡವನ್ನು ಪಾವತಿಸಲು ಬರುವ ಉಲ್ಲಂಘನೆದಾರರು ದಂಡಪಾವತಿಗೆ ಕಾಯದಂತೆ ಕ್ರಮ ಕೈಗೊಳ್ಳುವುದು.
- ಸರದಿಯಂತೆ ಠಾಣೆಯಲ್ಲಿರುವ ಎಲ್ಲಾ ಎ.ಎಸ್.ಐ ರವರುಗಳಿಗೆ ಟೋಯಿಂಗ್ ಕರ್ತವ್ಯಕ್ಕೆ ನೇಮಕ ಮಾಡುವುದು
- ಟೋಯಿಂಗ್ ವಾಹನದ ಸಿಬ್ಬಂದಿಗಳು ಸಾರ್ವಜನಿಕರೊಂದಿಗೆ ಯಾವುದೇ ರೀತಿಯಲ್ಲಿ ವ್ಯವಹರಿಸದಂತೆ ಎಚ್ಚರ ವಹಿಸಲು ಸೂಚಿಸುವುದು
- ಟೋಯಿಂಗ್ ಸಿಬ್ಬಂದಿಗಳು ಯಾವುದೇ ಸ್ವಂತ ನಿರ್ಧಾರ ತೆಗೆದುಕೊಳ್ಳದಂತೆ, ಉಸ್ತುವಾರಿ ಅಧಿಕಾರಿ ಸೂಚಿಸಿದ ವಾಹನಗಳನ್ನು ಮಾತ್ರ ಟೋ ಮಾಡುವಂತೆ ತಿಳುವಳಿಕೆ ನೀಡುವುದು.
- ಯಾವುದೇ ಕಾರಣಕ್ಕೂ ಟೋಯಿಂಗ್ ಸಿಬ್ಬಂದಿಗಳು ಸಾರ್ವಜನಿಕರೊಂದಿಗೆ ವಾಗ್ವಾದಕ್ಕೆ ಇಳಿಯದಂತೆ ಎಚ್ಚರಿಕೆಯನ್ನು ನೀಡುವುದು.
- ಪ್ರತಿ ದಿನ ಟೋಯಿಂಗ್ ಕಾರ್ಯಾಚರಣೆಯ ಸ್ಥಳಕ್ಕೆ ಅನಿರೀಕ್ಷಿತ ಭೇಟಿ ಕೊಟ್ಟು ಕಾರ್ಯಾಚರಣೆಯ ವಿವರಗಳನ್ನು ಪರಿಶೀಲಿಸುವುದು.
- ಟೋಯಿಂಗ್ ವಾಹನ ಬದಲಾದಾಗ ಅದರೊಂದಿಗೆ ಸಿಬ್ಬಂದಿಗಳೂ ಕೂಡ ಬದಲಾವಣೆಯಾಗಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು
- ಯಾವುದಾದರೂ ಟೋಯಿಂಗ್ ವಾಹನದ ಸಿಬ್ಬಂದಿ ಅವ್ಯವಹಾರದಲ್ಲಿ ತೊಡಗಿರುವುದು ತಿಳಿದುಬಂದಲ್ಲಿ ಟೋಯಿಂಗ್ ವಾಹನದೊಂದಿಗೆ ಸಂಬಂಧಪಟ್ಟ ಸಿಬ್ಬಂದಿಗಳನ್ನು ಕಪ್ಪು ಪಟ್ಟಿಗೆ ಸೇರಿಸಲು ಶಿಫಾರಸ್ಸು ಮಾಡುವುದು.
- ಟೋಯಿಂಗ್ ಮಾಡುವ ಸಂದರ್ಭದಲ್ಲಿ ವಾಹನಗಳು ಜಖಂಗೊಂಡಲ್ಲಿ, ರಿಪೇರಿ ಖರ್ಚನ್ನು ಟೋಯಿಂಗ್ ವಾಹನ ಮಾಲೀಕರಿಂದ ವಸೂಲು ಮಾಡಲು ಕ್ರಮ ಕೈಗೊಳ್ಳುವುದು. ಜಖಂ ಮಾಡಿದ ಸಿಬ್ಬಂದಿಗಳ ನಿರ್ಲಕ್ಷ್ಯವಿದ್ದರೆ ವರದಿ ಸಲ್ಲಿಸುವುದು.
- ವಾಹನದ ಸಾಮರ್ಥ್ಯಕ್ಕಿಂತ ಹೆಚ್ಚಿನ ವಾಹನಗಳನ್ನು ಟೋ ಮಾಡದಂತೆ ಸೂಚಿಸುವುದು.
- ಸಂಗ್ರಹಿಸಲಾದ ಟೋಯಿಂಗ್ ಮೊತ್ತವು ಮಾರನೇ ದಿವಸ ಸಂಬಂಧಿಸಿದ ಬ್ಯಾಂಕಿಗೆ ಜಮಾ ಆಗುತ್ತಿದೆಯೇ? ಇಲ್ಲವೇ? ಎಂಬುದನ್ನು ಖಚಿತಪಡಿಸಿಕೊಳ್ಳುವುದು.
- ಟೋಯಿಂಗ್ ವಾಹನಗಳಲ್ಲಿ ಕರ್ತವ್ಯ ನಿರ್ವಹಿಸುವ ಸಿಬ್ಬಂದಿಗಳು ಗೈರುಹಾಜರಾದರೆ, ಅಥವಾ ವಾಹನಗಳು ಯಾವ ಕಾರಣಕ್ಕೆ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಎಂಬ ಬಗ್ಗೆ ಸಮುಚಿತ ಮಾರ್ಗದಲ್ಲಿ ವರದಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

## ಟೋಯಿಂಗ್ ವಾಹನದಲ್ಲಿರಬೇಕಾದ ಪರಿಕರಗಳು

| ಪರಿಕರಗಳು | |
|---|---|
| ಠಾಣಾಧಿಕಾರಿ ಒದಗಿಸಬೇಕಾದದ್ದು | ಖಾಸಗಿ ಟೋಯಿಂಗ್ ವಾಹನ ಮಾಲೀಕರು ಒದಗಿಸಬೇಕಾದದ್ದು |
| ಹ್ಯಾಂಡಿ ಕ್ಯಾಮೆರಾ | ಮುಂಬದಿ ಮತ್ತು ಹಿಂಬದಿ ಎರಡು ಸಿಸಿಟಿವಿ ಕ್ಯಾಮೆರಾ, ಮೊಬೈಲ್ ಡಿವಿಆರ್ ವಿತ್ ಜಿ.ಪಿ.ಎಸ್ |
| ಬಾಡಿ ವೋರ್ನ್ ಕ್ಯಾಮೆರಾ | |
| ಕೋನ್ಸ್ | ವ್ಹೀಲ್ ಕ್ಲ್ಯಾಂಪ್‌ಗಳು |
| ಪಾರ್ಕಿಂಗ್ ಟ್ಯಾಗ್ಸ್ | ಮೆಗಾ ಫೋನ್ |
| ಟೋಯಿಂಗ್ ರಿಜಿಸ್ಟರ್ | ದಪ್ಪ ಹಗ್ಗ, ಚೈನ್ ಕೋನ್, ರಿಫ್ಲೆಕ್ಟರ್ |
| ಪೊಲೀಸ್ ಟೇಪ್, 20 ಮೀಟರ್ ಧ್ವನಿವರ್ಧಕಕ್ಕೆ ಬೇಕಾದ ವೈರ್ | ಸ್ಟಿಲ್ ಕ್ಯಾಮೆರಾ |

## ಟೋಯಿಂಗ್ ಉಸ್ತುವಾರಿ ಅಧಿಕಾರಿಯು ಕೈಗೊಳ್ಳಬೇಕಾದ ಕ್ರಮಗಳು

❖ <u>ಟೋಯಿಂಗ್ ಕಾರ್ಯಾಚರಣೆಗೆ ಹೊರಡುವ ಮುನ್ನ</u>

- ಟೋಯಿಂಗ್ ವಾಹನಕ್ಕೆ ಹಂಚಿಕೆ ಮಾಡಿರುವ ಸಿಬ್ಬಂದಿಗಳ ವಿವರಗಳನ್ನು ಪರಿಶೀಲಿಸುವುದು.
- ಟೋಯಿಂಗ್ ವಾಹನಕ್ಕೆ ಅಳವಡಿಸಿರುವ ಹೈಡ್ರಾಲಿಕ್ ಸಿಸ್ಟಮ್,ಕ್ಯಾಮೆರಾ/ಪಿ.ಎ. ಸಿಸ್ಟಮ್, ಹಾಗೂ ಇತರೆ ಪರಿಕರಗಳು ಸುಸ್ಥಿತಿಯಲ್ಲಿವೆಯೇ ಎಂಬ ಬಗ್ಗೆ ಪರಿಶೀಲಿಸುವುದು.
- ಟೋಯಿಂಗ್ ಉಸ್ತುವಾರಿ ಅಧಿಕಾರಿಯು ಬಾಡಿ ವೋರ್ನ್ ಕ್ಯಾಮೆರಾವನ್ನು ಧರಿಸಿ ನೀಟಾದ ಸಮವಸ್ತ್ರದಲ್ಲಿರತಕ್ಕದ್ದು.
- ಠಾಣಾ ಸರಹದ್ದಿನ ನೋ ಪಾರ್ಕಿಂಗ್ ಜಾಗಗಳ ಮಾಹಿತಿಯನ್ನು ಹೊಂದಿರತಕ್ಕದ್ದು
- ಕಾರ್ಯಾಚರಣೆಯ ವಿವರಗಳನ್ನು ಪರೀಕ್ಷಿಸಲು ಮೇಲಾಧಿಕಾರಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ತಮ್ಮ ಮೊಬೈಲ್ ಮೂಲಕ ಲಿಂಕನ್ನು ನೀಡುವುದು
- ಕಾರ್ಯಾಚರಣೆಗೆ ಹೊರಡುವ ಮುನ್ನ ಉಸ್ತುವಾರಿ ಅಧಿಕಾರಿಯು ಹಾಗೂ ಟೋಯಿಂಗ್ ಸಿಬ್ಬಂದಿಗಳು ತಮ್ಮ ಬಳಿ ಇರುವ ನಗದು ಮೊತ್ತವನ್ನು ಠಾಣೆಯ ಕ್ಯಾಷ್ ರಿಜಿಸ್ಟರ್‌ನಲ್ಲಿ ನಮೂದು ಮಾಡಿ ಹೊರಡುವುದು.

## ❖ ಟೋಯಿಂಗ್ ಕಾರ್ಯಾಚರಣೆಯ ವೇಳೆ

- ಟೋ ಮಾಡುವ ಪ್ರತಿ ವಾಹನದ ಕಾರ್ಯಾಚರಣೆಯ ಮೇಲ್ವಿಚಾರಣೆಯನ್ನು ಖುದ್ದು ನಿರ್ವಹಿಸುವುದು
- ಕಾರ್ಯಾಚರಣೆಯಲ್ಲಿ ಟೋಯಿಂಗ್ ವಾಹನವನ್ನು 5 ರಿಂದ 10 ಕಿ.ಮೀ ವೇಗದಲ್ಲಿ ಚಾಲನೆ ಮಾಡಿಸುತ್ತಾ ಹೂಟರ್ಸ್/ಸ್ಶೈರನ್ ಮಾಡುತ್ತಾ ಸಾಗುವುದು.
- ನಿಲುಗಡೆ ನಿಷೇಧಿತ ಸ್ಥಳದಲ್ಲಿ ನಿಲ್ಲಿಸಿರುವ ವಾಹನದ ಸಂಖ್ಯೆಯನ್ನು ನಿಲುಗಡೆ ನಿಷೇಧ ಸ್ಥಳದಲ್ಲಿ ನಿಲ್ಲಿಸಿರುವ ಬಗ್ಗೆ ತೆರವುಗೊಳಿಸಲು ಹಾಗೂ ಇಲ್ಲದಿದ್ದಲ್ಲಿ ಟೋ ಮಾಡಲಾಗುವುದೆಂದು ವಾಹನದ ಸಂಖ್ಯೆಯ ಸಮೇತ ಮೆಗಾ ಫೋನ್ ಮೂಲಕ ಎಚ್ಚರಿಕೆಯನ್ನು ನೀಡುವುದು.
- ಏನೆಂದು ಪ್ರಕಟಿಸಬೇಕು?
  - "ದ್ವಿಚಕ್ರ/ಕಾರ್/ವಾಹನದ ಸಂಖ್ಯೆ/ಕೆಎ/ಟಿಎನ್/ಎಪಿ_____ ವಾಹನವು ನೋ ಪಾರ್ಕಿಂಗ್ ಸ್ಥಳದಲ್ಲಿ ಅಥವಾ ಸಂಚಾರಕ್ಕೆ ಅಡೆತಡೆಯಾಗುವ ರೀತಿಯಲ್ಲಿ ನಿಂತಿದ್ದು, ಕೂಡಲೇ ತೆರವುಗೊಳಿಸಬೇಕು, ಇಲ್ಲವಾದಲ್ಲಿ ಟೋ ಮಾಡಲಾಗುವುದು"
- ಟೋ ಮಾಡುವ ಮೊದಲು, ತಪ್ಪಾಗಿ ವಾಹನವನ್ನು ನಿಲುಗಡೆ ಮಾಡಿದ್ದರ ಸ್ಥಳದ ಹಾಗೂ ವಾಹನದ ಛಾಯಾಚಿತ್ರ/ವಿಡಿಯೋ ಗಳನ್ನು ನಾಲ್ಕು ದಿಕ್ಕಿನಿಂದ ತೆಗೆಯುವುದು
- ಪ್ರಕಟಿಸಿದ 5 ನಿಮಿಷಗಳ ನಂತರ ವಾಹನದ ವಾರಸುದಾರರ ಬರದಿದ್ದಲ್ಲಿ ಮಾತ್ರ ಟೋಯಿಂಗ್ ಸಿಬ್ಬಂದಿಗೆ ವಾಹನವನ್ನು ಟೋ ಮಾಡಲು ಸೂಚಿಸುವುದು
- ಕಾರ್ಯಾಚರಣೆ ವೇಳೆ ವಾಹನಗಳು ಜಖಂ ಆಗದಂತೆ ನೋಡಿಕೊಳ್ಳುವುದು.
- ಛಾಯಾಚಿತ್ರ ಹಾಗೂ ವಿಡಿಯೋ ಚಿತ್ರಣವನ್ನು 64 ಜಿ.ಬಿ. ಪೆನ್‌ಡ್ರೈವ್‌ನಲ್ಲಿ ಠಾಣೆಯಲ್ಲಿ ದಿನಾಂಕವಾರು 30 ದಿನಗಳವರೆಗೆ ಶೇಖರಿಸಿಟ್ಟುಕೊಳ್ಳುವುದು
- ಟೋಯಿಂಗ್ ವಾಹನಕ್ಕೆ ವಾಹನಗಳನ್ನು ತುಂಬಿಕೊಳ್ಳುವ ಮುಂಚೆ ವಾರಸುದಾರರು ಬಂದಲ್ಲಿ, ಅವರಿಂದ ಕೇವಲ ನೋ-ಪಾರ್ಕಿಂಗ್ ನಿಯಮ ಉಲ್ಲಂಘನೆಗೆ ಮಾತ್ರ ಸ್ಥಳದಲ್ಲಿ ದಂಡವನ್ನು ಸಂಗ್ರಹಿಸುವುದು

## ❖ ಟೋಯಿಂಗ್ ಕಾರ್ಯಾಚರಣೆಯ ನಂತರ

- ವಾಹನವನ್ನು ಟೋ ಮಾಡಿ ತುಂಬಿಕೊಂಡ ನಂತರ ವಾಹನಗಳ ವಾರಸುದಾರರಿಗೆ ಅಥವಾ ಸ್ಥಳೀಯ ಸಾರ್ವಜನಿಕರಿಗೆ ಅರಿವಾಗುವಂತೆ ವಾಹನವನ್ನು ಟೋ ಮಾಡಲಾಗಿರುವ ಪೊಲೀಸ್ ಠಾಣೆ, ವಾಹನವನ್ನು ಶೇಖರಿಸಿಡಲಾಗುವ ಸ್ಥಳದ ವಿವರಗಳನ್ನು ಮೆಗಾ ಫೋನ್‌ನ ಮೂಲಕ ಪ್ರಕಟಿಸುವುದು
- ಟೋಯಿಂಗ್ ವಾಹನಕ್ಕೆ ವಾಹನಗಳನ್ನು ತುಂಬಿಕೊಂಡು ಹೊರಟ ನಂತರ ವಾರಸುದಾರರು ಬಂದಲ್ಲಿ ಅವರಿಂದ ನೋ-ಪಾರ್ಕಿಂಗ್ ನಿಯಮ ಉಲ್ಲಂಘನೆ ಜೊತೆಗೆ ಟೋಯಿಂಗ್ ಶುಲ್ಕವನ್ನು ಸಂಗ್ರಹಿಸುವುದು
- ಟೋ ಮಾಡಲಾದ ವಾಹನಗಳನ್ನು ನಿಗದಿಪಡಿಸಲಾದ ಸ್ಥಳಗಳಲ್ಲಿ ಶೇಖರಿಸಿಡುವುದು.

- ವಾರಸುದಾರರು ವಾಹನಗಳನ್ನು ಶೇಖರಿಸಿಟ್ಟಿರುವ ಸ್ಥಳಗಳಿಗೆ ಬಂದಾಗ ಟೋಯಿಂಗ್ ಮಾಡಲು ಕಾರಣವಾಗಿರುವ ಅಂಶಗಳ ಬಗ್ಗೆ ಶಾಂತ ರೀತಿಯಲ್ಲಿ ಮನವರಿಕೆ ಮಾಡಿಕೊಡುವುದು
- ವಾಹನದ ವಾರಸುದಾರರಿಂದ ಟೋಯಿಂಗ್ ಶುಲ್ಕ ಹಾಗೂ ನಿಯಮ ಉಲ್ಲಂಘನೆಯ ಶುಲ್ಕವನ್ನು ಪಿ.ಡಿ.ಎ ಮೂಲಕ ಸಂಗ್ರಹಿಸಿ ವಾಹನವನ್ನು ವಾರಸುದಾರರ ವಶಕ್ಕೆ ನೀಡುವುದು.
- ಉಸ್ತುವಾರಿ ಅಧಿಕಾರಿಯು ಟೋಯಿಂಗ್ ಕಾರ್ಯಚರಣೆಗೆ ಹೋಗಿದ್ದಲ್ಲಿ, ನಿಯೋಜಿತ ಎ.ಎಸ್.ಐ/ ಹೆಚ್.ಸಿ. ರವರು ವಾರಸುದಾರರಿಗೆ ಯಾವುದೇ ತೊಂದರೆಯಾಗದಂತೆ ವಾರುಸುದಾರರು ವಾಹನವನ್ನು ಪಡೆಯಲು ಅನುಕೂಲ ಮಾಡಿಕೊಡುವುದು.
- ಟೋ ಮಾಡಲಾದ ವಾಹನವನ್ನು ತಾಂತ್ರಿಕ ಅಥವಾ ಕಾನೂನಾತ್ಮಕ ಕಾರಣಗಳಿಗಾಗಿ ಬಿಡುಗಡೆಗೊಳಿಸಿದ್ದಲ್ಲಿ, ಅಂತಹ ವಾಹನಗಳ ಸಂಖ್ಯೆಯ ಸಮೇತ ಕಾನೂನಾತ್ಮಕ ಕಾರಣಗಳನ್ನು ರಿಜಿಸ್ಟರ್‌ನಲ್ಲಿ ನಮೂದಿಸುವುದು.
- ಪ್ರತಿ ನಿತ್ಯ ಠಾಣಾಧಿಕಾರಿಗಳಿಗೆ ಎಷ್ಟು ವಾಹನಗಳನ್ನು ಟೋ ಮಾಡಿ ದಂಡ ಸಂಗ್ರಹಿಸಲಾಗಿದೆ ಎಂಬ ವಿವರಗಳನ್ನು ಸಲ್ಲಿಸುವುದು.

**ಟೋಯಿಂಗ್ ಯಾವಾಗ? ಮತ್ತು ಎಲ್ಲಿ?**

- ನಿಷೇಧಿತ, ಉಪೇಕ್ಷಿತ, ಹಾಳಾದ, ಸುಟ್ಟಿರುವ ಅಥವಾ ಭಾಗಶ: ನೆಲಸಮವಾದ ಹಾಗೂ ಸುಗಮ ಸಂಚಾರಕ್ಕೆ ಅಡಚಣೆಯಾಗುವ ರೀತಿಯಲ್ಲಿ ಇದ್ದಲ್ಲಿ
- ಪಾದಚಾರಿ ರಸ್ತೆಯಲ್ಲಿ, ಪಾದಚಾರಿಗಳ ದಾಟು ರಸ್ತೆಯಲ್ಲಿ, ಇಂಟರ್‌ಸೆಕ್ಷನ್‌ನಲ್ಲಿ, ತಪ್ಪು ಮಾರ್ಗದಲ್ಲಿ, ಡಬ್ಬಲ್ ಪಾರ್ಕಿಂಗ್ ಮಾಡಿದ್ದಲ್ಲಿ
- ಮದ್ಯಪಾನ ಮಾಡಿ ವಾಹನ ಚಲಾಯಿಸುವವರ ವಿರುದ್ಧ ಹಮ್ಮಿಕೊಳ್ಳಲಾದ ಕಾರ್ಯಾಚರಣೆ ಸಮಯದಲ್ಲಿ
- ಅತಿಗಣ್ಯ ವ್ಯಕ್ತಿಗಳು ಸಾಗುವಾಗ – ಸಂಪೂರ್ಣ ಮಾರ್ಗವನ್ನು ನಿಲುಗಡೆ ನಿಷೇಧ ವಲಯವೆಂದು ಘೋಷಿಸಿದಾಗ
- ರ್‍ಯಾಲಿಗಳು/ಮೆರವಣಿಗೆಗಳು ಮತ್ತು ಸಾರ್ವಜನಿಕ ಸಭೆಗಳು ಜರುಗಿದಾಗ.

**ಟೋಯಿಂಗ್ ಸಿಬ್ಬಂದಿಗಳ ಕಾರ್ಯನಿರ್ವಹಣೆ**

- ಟೋಯಿಂಗ್ ಸಿಬ್ಬಂದಿಯು ಸೌಜನ್ಯದಿಂದ ಸಾರ್ವಜನಿಕರೊಂದಿಗೆ ನಡೆದುಕೊಳ್ಳುವುದು.
- ಕಡ್ಡಾಯವಾಗಿ ನೌಕಾನೀಲಿ (Navy blue) ಬಣ್ಣದ ಸಮವಸ್ತ್ರವನ್ನು ಧರಿಸಿರುವುದು.
- ರಾತ್ರಿ ವೇಳೆ ಟೋಯಿಂಗ್ ಸಿಬ್ಬಂದಿಯು ರಿಫ್ಲೆಕ್ಟೀವ್ ಜಾಕೆಟ್‌ಗಳನ್ನು ಧರಿಸಿರುವುದು.
- ಸಮವಸ್ತ್ರದ ಮೇಲೆ ಹೆಸರಿನ ಫಲಕವನ್ನು ಪ್ರದರ್ಶಿಸುವುದು.

- ಉಸ್ತುವಾರಿ ಅಧಿಕಾರಿಯನ್ನು ಹೊರತುಪಡಿಸಿ ಸಿಬ್ಬಂದಿಯು ವಾಹನ ಮಾಲೀಕರೊಂದಿಗೆ ಸಂಭಾಷಿಸಬಾರದು.
- ಸಿಬ್ಬಂದಿಯ ಹಾಜರಾತಿಯು ಕಡ್ಡಾಯವಾಗಿದ್ದು, ಅವರುಗಳು ಶುಭ್ರತೆ ಮತ್ತು ಆರೋಗ್ಯಕರವಾಗಿ ಇರಬೇಕು.

**ಟೋಯಿಂಗ್ ದರ**

ಉಲ್ಲಂಘನೆ ಸ್ಥಳದಿಂದ ಪೊಲೀಸ್ ಠಾಣಾ ವ್ಯಾಪ್ತಿಯ ಸಂಗ್ರಹಣಾ ಸ್ಥಳಕ್ಕೆ ಒಮ್ಮೆ ವಾಹನವನ್ನು ಎಳೆದೊಯ್ದಾಗ ಸದರಿ ವಾಹನಕ್ಕೆ ಟೋಯಿಂಗ್ ದರವನ್ನು ಎರಡು ವಿಧಗಳಲ್ಲಿ ಸಂಗ್ರಹಿಸಬಹುದು.

1. ಪಾರ್ಕಿಂಗ್ ಉಲ್ಲಂಘನೆ – ರೂ 500–00 ಮೊದಲ ನೋ ಪಾರ್ಕಿಂಗ್ ಉಲ್ಲಂಘನೆ, ರೂ. 1000/– ಎರಡು ಮತ್ತು ಹೆಚ್ಚು ಬಾರಿ ನೋ ಪಾರ್ಕಿಂಗ್ ಉಲ್ಲಂಘನೆ ವಾಹನದ ಮಾದರಿ ತಾರತಮ್ಯವಿಲ್ಲದೆ
2. ಟೋಯಿಂಗ್ ಶುಲ್ಕ – ವಾಹನದ ಮಾದರಿಗನುಗುಣವಾಗಿ(ಕೆಳಕಂಡಂತೆ)

| ವಾಹನಗಳ ವಿಧ | ದರ (ರೂಗಳಲ್ಲಿ) |
|---|---|
| ದ್ವಿಚಕ್ರ ವಾಹನಗಳು | 650-00 |
| ಲಘು ಮೋಟಾರ್ ವಾಹನಗಳು | 1000-00 |
| ಮಧ್ಯಮ ಮೋಟಾರ್ ವಾಹನಗಳು | 1250-00 |
| ಭಾರೀ ಮೋಟಾರ್ ವಾಹನಗಳು | 1500-00 |

**<u>ಟೋಯಿಂಗ್ ದರವನ್ನು ಸಂಗ್ರಹಿಸಿದಕ್ಕೆ ರಶೀದಿ</u>**

ವಾಹನಗಳನ್ನು ಎಳೆದೊಯ್ಯಲು ಬಳಸುವ ಟೋಯಿಂಗ್ ವಾಹನ ವಿಧದ ಮೇಲೆ (ಸರ್ಕಾರ ಅಥವಾ ಖಾಸಗಿ ಟೋಯಿಂಗ್ ವಾಹನ) ರಶೀದಿ ರಚಿತಗೊಂಡಿರುತ್ತೆ. ಸರ್ಕಾರಿ ಟೋಯಿಂಗ್ ವಾಹನವನ್ನು ಉಪಯೋಗಿಸಿದ್ದಲ್ಲಿ ಉಲ್ಲಂಘನೆದಾರರಿಗೆ ಒಂದು ರಶೀದಿಯನ್ನು ಮಾತ್ರ ಬಳಸುವುದು ಮತ್ತು ಈ ರಶೀದಿ ಮೂಲಕ ಸಂಗ್ರಹಿಸಿದ ಸಂಪೂರ್ಣ ಟೋಯಿಂಗ್ ಶುಲ್ಕವನ್ನು ಖಜಾನೆ ಶಾಖೆಗೆ ಪಾವತಿಸಬೇಕು.

ಖಾಸಗಿ ಟೋಯಿಂಗ್ ವಾಹನವನ್ನು ಉಪಯೋಗಿಸಿದಾಗ ಎರಡು ವಿವಿಧ ಹಣಕಾಸಿನ ವ್ಯವಹಾರಗಳಿಗೆ ಎರಡು ರಶೀದಿಯನ್ನು ಉಲ್ಲಂಘನೆದಾರರಿಗೆ ನೀಡಬೇಕು. (ಪಾರ್ಕಿಂಗ್ ಉಲ್ಲಂಘನೆ ದರಕ್ಕೆ ಹಾಗೂ ಟೋ ಮಾಡಲಾದ ಬಾಬ್ತು ಟೋಯಿಂಗ್ ದರಕ್ಕೆ)

ಎರಡು ವಿವಿಧ ರೀತಿಯ ಅಂದರೆ ಸರ್ಕಾರದ ಬಾಬ್ತು ಮತ್ತು ಖಾಸಗಿ ಮಾಲೀಕರಿಗೆ ನೀಡುವ ಮೊತ್ತದ ಬಗ್ಗೆ ಸ್ಪಷ್ಟವಾಗಿ ಸಾರ್ವಜನಿಕರಿಗೆ ಯಾವುದೇ ಸಂಶಯಕ್ಕೆ ಆಸ್ಪದವಾಗದಂತೆ ನಯವಾಗಿ ವಿವರಿಸುವುದು.

ಖಾಸಗಿ ಟೋಯಿಂಗ್ ವಾಹನವನ್ನು ಬಳಸಿದಾಗ ಸಂಗ್ರಹಿಸಲಾದ ಟೋಯಿಂಗ್ ದರದಿಂದ ಖಾಸಗಿ ಮಾಲೀಕರಿಗೆ ಕೊಡ ಮಾಡುವ ಮೊತ್ತ.

| ವಾಹನಗಳ ವಿಧ | ಒಟ್ಟು ಟೋಯಿಂಗ್ ದರ | ಸರ್ಕಾರಕ್ಕೆ ಪಾವತಿಸಬೇಕಾದ ಮೊತ್ತ | ಖಾಸಗಿ ಟೋಯಿಂಗ್ ವಾಹನದ ಮಾಲೀಕರಿಗೆ ಕೊಡಬೇಕಾದ ಮೊತ್ತ |
|---|---|---|---|
| ದ್ವಿಚಕ್ರ ವಾಹನಗಳು | 650-00 | 325-00 | 325-00 |
| ಲಘು ಮೋಟಾರ್ ವಾಹನಗಳು | 1000-00 | 500-00 | 500-00 |
| ಮಧ್ಯಮ ಮೋಟಾರ್ ವಾಹನಗಳು | 1250-00 | 625-00 | 625-00 |
| ಭಾರೀ ಮೋಟಾರ್ ವಾಹನಗಳು | 1500-00 | 750-00 | 750-00 |

ಟೋ ಮಾಡಿದ ವಾಹನಕ್ಕೆ ಸಂಗ್ರಹಿಸುವ ಒಟ್ಟು ಶುಲ್ಕ (ಪಾರ್ಕಿಂಗ್ ಉಲ್ಲಂಘನೆ + ಟೋಯಿಂಗ್ ಬಾಬ್ತು)

| ವಾಹನಗಳ ವಿಧ | ಪಾರ್ಕಿಂಗ್ ಉಲ್ಲಂಘನೆ ದರ (ಮೊದಲನೆ ಬಾರಿ) | ಪಾರ್ಕಿಂಗ್ ಉಲ್ಲಂಘನೆ ದರ (ಎರಡನೇ ಬಾರಿ) | ಟೋಯಿಂಗ್ ದರ | ಒಟ್ಟು |
|---|---|---|---|---|
| ದ್ವಿಚಕ್ರ ವಾಹನಗಳು | 500-00 | 1000-00 | 650-00 | 1150-00 |
| ಲಘು ಮೋಟಾರ್ ವಾಹನಗಳು | 500-00 | 1000-00 | 1000-00 | 1500-00 |
| ಮಧ್ಯಮ ಮೋಟಾರ್ ವಾಹನಗಳು | 500-00 | 1000-00 | 1250-00 | 1750-00 |
| ಭಾರೀ ಮೋಟಾರ್ ವಾಹನಗಳು | 500-00 | 1000-00 | 1500-00 | 2000-00 |

ಟೋ ಮಾಡಲಾದ ಎಲ್ಲಾ ಪ್ರಕರಣಗಳಲ್ಲಿ ಸಂಗ್ರಹಿಸಲಾದ ಒಟ್ಟು ಶುಲ್ಕಕ್ಕೆ ಪಿ.ಡಿ.ಎ ಯಿಂದ ರಶೀದಿಯನ್ನು ನೀಡಲಾಗುತ್ತದೆ. ಈ ರಶೀದಿಯು ಪಾರ್ಕಿಂಗ್ ಉಲ್ಲಂಘನೆಗಾಗಿ ಅದರೆ 500–00 ರೂಗಳಿಗೆ ಮತ್ತು ಸರ್ಕಾರಕ್ಕೆ ಪಾವತಿ ಮಾಡಬೇಕಾದ ಟೋಯಿಂಗ್ ದರ ದ್ವಿಚಕ್ರ ವಾಹನಕ್ಕೆ 650/– ರೂ, ಕಾರುಗಳಿಗೆ 1000–00 ರೂ, ಮಧ್ಯಮ ಮೋಟಾರು ವಾಹನಗಳಿಗೆ 1250–00 ರೂ ಮತ್ತು ಭಾರೀ ಮೋಟಾರ್ ವಾಹನಗಳಿಗೆ 1500–00 ರೂಗಳ ದರಗಳನ್ನು ಒಳಗೊಂಡಿರುತ್ತದೆ. ಖಾಸಗಿ ಟೋಯಿಂಗ್ ವಾಹನದ ಮಾಲೀಕರಿಗೆ ನೀಡುವ ಮೊತ್ತವು ಸಹ

ಪ್ರತ್ಯೇಕವಾಗಿ ರಸೀದಿಯಲ್ಲಿ ನಮೂದಾಗಲಿದ್ದು, ಈ ಮೊತ್ತವು ಖಾಸಗಿ ಮಾಲೀಕರಿಗೆ ಕೊಡಬೇಕಾಗಿದ್ದು, ಈ ಮೊತ್ತವನ್ನು ಸಂಬಂಧಪಟ್ಟ ಡಿಸಿಪಿ ರವರ ಕಛೇರಿಯಲ್ಲಿ ಪ್ರತ್ಯೇಕ ಅಕೌಂಟ್‌ಗೆ ಜಮಾ ಮಾಡುವುದು.

ಟೋಯಿಂಗ್ ಕಾರ್ಯಾಚರಣೆಯಲ್ಲಿ ಸರ್ಕಾರಕ್ಕೆ ಜಮೆ ಮಾಡುವ ಮೊತ್ತವು ಖಜಾನೆಗೆ ಪಿ.ಡಿ.ಎ ರಶೀದಿ ಮುಖಾಂತರ ಹಾಗೂ ಖಾಸಗಿ ಟೋಯಿಂಗ್ ವಾಹನಗಳ ಮಾಲೀಕರಿಗೆ ನೀಡಬೇಕಾದ ಒಟ್ಟಾರೆ ಮೊತ್ತದ ದೃಢೀಕೃತ ಮಾಹಿತಿಯ ವಿವರಗಳನ್ನು ಸಂಬಂಧಪಟ್ಟ ಡಿಸಿಪಿ ರವರ ಕಛೇರಿಗೆ ಸಲ್ಲಿಸುವುದು.

**ಟೋಯಿಂಗ್ ವಾಹನಗಳ ರೊಟೇಷನ್ ಪದ್ಧತಿ**

ಎ.ಸಿ.ಪಿ. ದರ್ಜೆಯ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿದ್ದು, ಠಾಣೆಗಳ ಹೆಸರಿನ ಇಂಗ್ಲೀಷ್ ವರ್ಣಮಾಲೆಯ ಕ್ರಮದಲ್ಲಿ(Alphabetical order) ಪ್ರತಿ ವಾಹನವನ್ನು, ಪ್ರತಿ 15 ದಿನಗಳಿಗೊಮ್ಮೆ ಒಂದೊಂದು ಠಾಣೆಗೆ ನಿಯೋಜಿಸುವುದು.

**ಎ.ಸಿ.ಪಿ ಮತ್ತು ಡಿ.ಸಿ.ಪಿ. ರವರ ಕರ್ತವ್ಯಗಳು**

- ಸಂಬಂಧಿಸಿದ ಎ.ಸಿ.ಪಿ ರವರು ಅತ್ಯಂತ ನಿಕಟವಾಗಿ ಟೋಯಿಂಗ್ ವಾಹನದ ಕಾರ್ಯಾಚರಣೆಯ ಮೇಲ್ವಿಚಾರಣೆಯನ್ನು ಮಾಡಿ ನೀಡಲಾದ ಸೂಚನೆಗಳು ಮತ್ತು ವಿಧಾನಗಳನ್ನು ಪಾಲನೆ ಮಾಡುತ್ತಿರುವ ಬಗ್ಗೆ ಪ್ರತಿದಿನ ಖಚಿತಪಡಿಸಿಕೊಳ್ಳುವುದು.

- ಸಂಬಂಧಿಸಿದ ಎ.ಸಿ.ಪಿರವರು ಟೋಯಿಂಗ್ ವಾಹನವು ಕಾರ್ಯಾಚರಣೆ ಪ್ರಾರಂಭಿಸುವುದಕ್ಕೂ ಮುನ್ನ ಟೆಂಡರ್‌ನಲ್ಲಿ ವಿಧಿಸಿರುವ ಷರತ್ತುಗಳ ಪಾಲನೆಯಾಗುತ್ತಿರುವ ಬಗ್ಗೆ ಖಚಿತಪಡಿಸಿಕೊಳ್ಳುವುದು.

- ಸಂಬಂಧಿಸಿದ ಎ.ಸಿ.ಪಿ ರವರು ತಮ್ಮ ವ್ಯಾಪ್ತಿಯ ಪೊಲೀಸ್ ಠಾಣೆಗಳಿಗೆ ಹಂಚಿಕೆ ಮಾಡಲಾಗಿರುವ ಟೋಯಿಂಗ್ ವಾಹನಗಳ ಪರಿಶೀಲನೆಯನ್ನು ಪ್ರತಿ ಮಾಹೆಯ ಮೊದಲ ಭಾನುವಾರದಂದು ಕೈಗೊಂಡು, ಕಾರ್ಯಾಚರಣೆಗಳು ಪೂರ್ವ ನಿರ್ಧರಿತ ಕಾರ್ಯನಿರ್ವಹಣಾ ವಿಧಾನಗಳನ್ನು ಅನುಸುರಿಸುತ್ತಿರುವ ಬಗ್ಗೆ ಪರಿಶೀಲಿಸುವುದು.

- ಟೋಯಿಂಗ್ ವಾಹನದ ಅಧಿಕಾರಿಗಳು ಮತ್ತು ಸಿಬ್ಬಂದಿಯ ಕಾನೂನು ಬದ್ಧವಾಗಿ ಕಾರ್ಯ ನಿರ್ವಹಿಸುತ್ತಿರುವರೇ? ಮೇಲೆ ತಿಳಿಸಿದಂತೆ ರಶೀದಿಗಳನ್ನು ನೀಡುತ್ತಿರುವರೇ? ಉಲ್ಲಂಘನೆದಾರರಿಂದ ನಿಗದಿತ ಮೊತ್ತವನ್ನು ಸಂಗ್ರಹಿಸುತ್ತಿರುವರೇ ಎಂಬುದನ್ನು ಸಂಬಂಧಿಸಿದ ಎಸಿಪಿ ರವರುಗಳು ಖಚಿತಪಡಿಸಿಕೊಳ್ಳುವುದು. ಒಂದು ವೇಳೆ ನಿಗದಿತ ಮೊತ್ತಕ್ಕಿಂತ ಹೆಚ್ಚಿನ ಹಣವನ್ನು ಸಂಗ್ರಹಿಸಿದ್ದಾಗಲೀ, ಸಂಗ್ರಹಿಸಿದ ಹಣಕ್ಕೆ ಸರಿಯಾದ

ರೀತಿಯಲ್ಲಿ ರಶೀದಿಯನ್ನು ನೀಡದೇ ಇರುವುದು ಗೋಚರಿಸಿದ್ದಲ್ಲಿ ಅದನ್ನು ಕಾನೂನು ಬಾಹಿರವಾಗಿ ವಸೂಲಿ ಮಾಡಿದ್ದೆಂದು ಪರಿಗಣಿಸಿ ಸಂಬಂಧಿಸಿದವರ ವಿರುದ್ಧ ಸೂಕ್ತ ಕಾನೂನು ರೀತ್ಯಾ ಕ್ರಮ ಜರುಗಿಸುವುದು.

❖ ಡಿ.ಸಿ.ಪಿ. ರವರುಗಳು ತಮ್ಮ ವ್ಯಾಪ್ತಿಯ ಟೋಯಿಂಗ್ ವಾಹನಗಳ ಕಾರ್ಯನಿರ್ವಹಣೆಯ ಬಗ್ಗೆ ಸಾಪ್ತಾಹಿಕ ವಿಮರ್ಶೆ ನಡೆಸುವುದು.

❖ ಸಂಚಾರ ಯೋಜನೆ ವಿಭಾಗದಲ್ಲಿ ಟೋಯಿಂಗ್ ಕಾರ್ಯಾಚರಣೆಯ ಮೇಲುಸ್ತುವಾರಿಗೆ ಎ.ಸಿ.ಪಿ ಸಂಚಾರ ಯೋಜನೆರವರ ನೇತೃತ್ವದಲ್ಲಿ ರಚಿಸಲಾಗಿರುವ ಸಮಿತಿಗೆ ಮಾಹಿತಿಯನ್ನು ಎಲ್ಲಾ ಸಂಚಾರ ಪೊಲೀಸ್ ಠಾಣೆಗಳವರು ನಿಗದಿತ ನಮೂನೆಯಲ್ಲಿ ಒದಗಿಸುವುದು. ಈ ಮೇಲ್ವಿಚಾರಣೆ ಸಮಿತಿಯು ಟೋಯಿಂಗ್ ಕಾರ್ಯನಿರ್ವಹಣೆಯ ಬಗ್ಗೆ ಜಂಟಿ/ಅಪರ ಪೊಲೀಸ್ ಆಯುಕ್ತರಿಗೆ ಮಾಹಿತಿ ಒದಗಿಸುವುದು.

(ಡಾ|| ಬಿ.ಎ. [illegible]ಕಾಂತೇಗೌಡ)
ಜಂಟಿ ಪೊಲೀಸ್ ಆಯುಕ್ತರು
ಸಂಚಾರ, ಬೆಂಗಳೂರು ನಗರ.

ಗೆ,

ಬೆಂಗಳೂರು ನಗರದ ಎಲ್ಲಾ ಸಂಚಾರ ಪೊಲೀಸ್ ಇನ್ಸ್‌ಪೆಕ್ಟರ್‌ಗಳಿಗೆ.

ಪ್ರತಿಗಳನ್ನು:

1. ಉಪ ಪೊಲೀಸ್ ಆಯುಕ್ತರು, ಸಂಚಾರ ಪೂರ್ವ ಮತ್ತು ಪಶ್ಚಿಮ ವಿಭಾಗ, ಬೆಂಗಳೂರು ನಗರ.
2. ಎಲ್ಲಾ ಸಹಾಯಕ ಪೊಲೀಸ್ ಆಯುಕ್ತರು, ಸಂಚಾರ ಉಪ ವಿಭಾಗಗಳು, ಬೆಂಗಳೂರು ನಗರ.

ಪ್ರತಿಯನ್ನು: ಅಭಿನಂದನೆಗಳೊಂದಿಗೆ:

ಮಾನ್ಯ ಪೊಲೀಸ್ ಆಯುಕ್ತರು, ಬೆಂಗಳೂರು ನಗರ.

ಅನುಬಂಧ-3

(65)





**ಕರ್ನಾಟಕ ಸರ್ಕಾರ**

ಸಂಖ್ಯೆ:ಹೆಚ್‌ಡಿ 330 ಎಸ್‌ಎಸ್‌ಟಿ 2016

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ:20.09.2016

**ಅಧಿಸೂಚನೆ**

ಬೆಂಗಳೂರು ನಗರ ಸಂಚಾರ ವಿಭಾಗದ ವ್ಯಾಪ್ತಿಯ ರಸ್ತೆಗಳಲ್ಲಿ ಅಸ್ತವ್ಯಸ್ತ ಹಾಗೂ ಅಸಮರ್ಪಕವಾಗಿ, ನಿಷೇಧಿತ/ನಿರ್ಬಂಧಿತ ಸ್ಥಳಗಳಲ್ಲಿ ನಿಲ್ಲಿಸುವ ಹಾಗೂ ಸುಗಮ ಸಂಚಾರ ವ್ಯವಸ್ಥೆಗೆ ಅಡಚಣೆಯನ್ನುಂಟು ಮಾಡುವಂತಹ ವಾಹನಗಳನ್ನು ಟೋ ಮಾಡಲು ನಗರ ಸಂಚಾರ ಪೊಲೀಸ್ ವತಿಯಿಂದ ವಾಹನ ಚಾಲಕ/ಮಾಲೀಕರಿಂದ ಟೋಯಿಂಗ್ ಶುಲ್ಕ ಸೇರಿ ದಂಡ ವಸೂಲು ಮಾಡಲಾಗುತ್ತದೆ. ಈ ರೀತಿ ಟೋಯಿಂಗ್ ಮಾಡಲು ಖಾಸಗಿ ಟೋಯಿಂಗ್ ವಾಹನಗಳನ್ನು ಬಾಡಿಗೆ ಆಧಾರದಲ್ಲಿ ಪಡೆದು ನಿರ್ವಹಿಸಲಾಗುತ್ತಿದ್ದು, ಟೋ ಮಾಡಲಾಗುವ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ಬಾಡಿಗೆ ಮೊತ್ತಕ್ಕೆ ಸಂಬಂಧಿಸಿದಂತೆ ದರಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 63 ಎಸ್‌ಎಸ್‌ಟಿ 2007, ದಿನಾಂಕ:19.05.2008ರಲ್ಲಿ ನಿಗಧಿಪಡಿಸಿದೆ.

ಬೆಂಗಳೂರು ನಗರಕ್ಕೆ ಅನ್ವಯವಾಗುವಂತೆ ಪ್ರಸ್ತುತ ಇರುವ ದರಗಳನ್ನು, ಟೋಯಿಂಗ್ ಮಾಡುವ ವಾಹನಗಳ ಬಾಡಿಗೆ ದರದ ಏರಿಕೆಯ ಕಾರಣಗಳಿಂದ ಪರಿಷ್ಕರಿಸಬೇಕಾಗಿರುವುದರಿಂದ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ದರ್ಜೆಯ ಅಥವಾ ಅದಕ್ಕಿಂತ ಹೆಚ್ಚಿನ ದರ್ಜೆಯ ಅಧಿಕಾರಿಗಳು ವಾಹನಗಳನ್ನು ಟೋ ಮಾಡಿಸಲು ಹಾಗೂ ವಾಹನ ಚಾಲಕರಿಗೆ/ಮಾಲೀಕರಿಗೆ ಟೋಯಿಂಗ್ ಶುಲ್ಕವನ್ನು ವಿಧಿಸಲು 1963ರ ಕರ್ನಾಟಕ ಮೋಟಾರು ವಾಹನಗಳ ನಿಯಮ 325 ಉಪನಿಯಮ (3)ರಲ್ಲಿ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರದನ್ವಯ ಈ ಕೆಳಕಂಡಂತೆ ಪರಿಷ್ಕರಿಸಿ ನಿಗಧಿಪಡಿಸಿದೆ.

| ಕ್ರ ಸಂ | ವಾಹನಗಳ ವಿಧ | ಹಿಂದಿನ ಅಧಿಸೂಚನೆಯನ್ವಯ ಇರುವ ದರಗಳು | | ಪರಿಷ್ಕೃತ ದರಗಳು | |
|---|---|---|---|---|---|
| | | ಟೋ ಮಾಡಲಾದ ವಾಹನಗಳ ಮಾಲೀಕರಿಂದ ವಸೂಲು ಮಾಡಲಾದ ದರ | ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರ | ಟೋ ಮಾಡಲಾದ ವಾಹನಗಳ ಮಾಲೀಕರಿಂದ ವಸೂಲು ಮಾಡಲಾದ ದರ | ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರ |
| 1 | ಭಾರಿ ಸಾಗಣೆ ವಾಹನಗಳು | 500-00 | 200-00 | 1500-00 | 750-00 |
| 2 | ಮಧ್ಯಮ ಸಾಗಣೆ ವಾಹನಗಳು | 400-00 | 175-00 | 1250-00 | 625-00 |
| 3 | ಲಘು ವಾಹನಗಳು (ಕಾರುಗಳು, ಮೂರು ಚಕ್ರ ವಾಹನಗಳು, ಟೆಂಪೋಗಳು ಮತ್ತು ಆಟೋ ರಿಕ್ಷಾಗಳು) | 300-00 | 150-00 | 1000-00 | 500-00 |
| 4 | ದ್ವಿಚಕ್ರ ವಾಹನಗಳು | 200-00 | 100-00 | 650-00 | 325-00 |

ಇದರೊಂದಿಗೆ ಸಂಚಾರ ನಿಯಮ ಉಲ್ಲಂಘನೆಯ ಆಧಾರದ ಮೇಲೆ ಸಂಬಂಧಿಸಿದ ವ್ಯಾಪ್ತಿಯಲ್ಲಿರುವ ನ್ಯಾಯಾಲಯಗಳು ಕರ್ನಾಟಕ ಮೋಟಾರು ವಾಹನಗಳ ಅಧಿನಿಯಮದನ್ವಯ ದಂಡವನ್ನು ವಿಧಿಸಿದಲ್ಲಿ, ಆ ದಂಡವನ್ನೂ ಸಹ ವಾಹನ ಚಾಲಕರು/ಮಾಲೀಕರು ಪಾವತಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶದನ್ವಯ
ಮತ್ತು ಅವರ ಹೆಸರಿನಲ್ಲಿ,

(ಕೆ.ಪದ್ಮನಿದೇವ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)
☏080-22033326.e-mail:uslo-home@karnataka.gov.in

ಇವರಿಗೆ:
ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಮುಂದಿನ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟಿಸಿ, ಒಳಾಡಳಿತ ಇಲಾಖೆ, ಕಾನೂನು & ಸುವ್ಯವಸ್ಥೆ-ಎ ಶಾಖೆಗೆ 25 ಪ್ರತಿಗಳನ್ನು ಒದಗಿಸುವಂತೆ ಕೋರಿದೆ.

ಪ್ರತಿ:
1) ಮಹಾಲೇಖಪಾಲರು, (ಎ ಮತ್ತು ಇ), ಕರ್ನಾಟಕ, ಬೆಂಗಳೂರು.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
3) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು.
4) ಸರ್ಕಾರದ ಪ್ರಧಾನ ಕಾರ್ಯದರ್ಶಿ(ಪಿಸಿಎಎಸ್), ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು.
5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹು ಮಹಡಿಗಳ ಕಟ್ಟಡ, ಬೆಂಗಳೂರು.
6) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ನೃಪತುಂಗ ರಸ್ತೆ, ಬೆಂಗಳೂರು.
7) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕಾನೂನು ಮತ್ತು ಸುವ್ಯವಸ್ಥೆ, ಬೆಂಗಳೂರು.
8) ಪೊಲೀಸ್ ಮಹಾನಿರೀಕ್ಷಕರು ಮತ್ತು ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ, ಬೆಂಗಳೂರು.
9) ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಬೆಂಗಳೂರು.
10) ಉಪಾಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಿತ ಬೆಂಗಳೂರು.
11) ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ, ಟಿಟಿಎಂಸಿ, 'ಎ' ಬ್ಲಾಕ್, 1ನೇ ಮಹಡಿ ಶಾಂತಿ ನಗರ, ಬೆಂಗಳೂರು.
12) ಹೆಚ್ಚುವರಿ ಪೊಲೀಸ್ ಆಯುಕ್ತರು, ಸಂಚಾರ ಮತ್ತು ಭದ್ರತೆ, ಬೆಂಗಳೂರು
13) ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ, ವಿಧಾನ ಸೌಧ.
14) ಒಡಿಜಿಸಿ/ಶಾಖಾ ರಕ್ಷ ಕಡತ, ಹೆಚ್ಚುವರಿ ಪ್ರತಿ.

ಕರ್ನಾಟಕ ಸರ್ಕಾರ

ಸಂಖ್ಯೆ:ಹೆಚ್‌ಡಿ 185 ಎಸ್‌ಎಸ್‌ಟಿ 2018

ಕರ್ನಾಟಕ ಸರ್ಕಾರ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ:03.03.2018

## ಅಧಿಸೂಚನೆ

ಮಂಗಳೂರು, ಮೈಸೂರು ಹುಬ್ಬಳ್ಳಿ-ಧಾರವಾಡ ಮತ್ತು ಬೆಳಗಾವಿ ನಗರ ಸಂಚಾರ ವಿಭಾಗದ ವ್ಯಾಪ್ತಿಯ ರಸ್ತೆಗಳಲ್ಲಿ ಅಸ್ತವ್ಯಸ್ಥ ಹಾಗೂ ಅಸಮರ್ಪಕವಾಗಿ, ನಿಷೇಧಿತ/ನಿರ್ಬಂಧಿತ ಸ್ಥಳಗಳಲ್ಲಿ ನಿಲ್ಲಿಸುವ ಹಾಗೂ ಸುಗಮ ಸಂಚಾರ ವ್ಯವಸ್ಥೆಗೆ ಅಡಚಣೆಯನ್ನುಂಟು ಮಾಡುವಂತಹ ವಾಹನಗಳನ್ನು ಟೋ ಮಾಡಲು ನಗರ ಸಂಚಾರ ಪೊಲೀಸ್ ವತಿಯಿಂದ ವಾಹನ ಚಾಲಕ/ಮಾಲೀಕರಿಂದ ಟೋಯಿಂಗ್ ಶುಲ್ಕ ಸೇರಿ ದಂಡ ವಸೂಲು ಮಾಡಲಾಗುತ್ತದೆ. ಈ ರೀತಿ ಟೋಯಿಂಗ್ ಮಾಡಲು ಖಾಸಗಿ ಟೋಯಿಂಗ್ ವಾಹನಗಳನ್ನು ಬಾಡಿಗೆ ಆಧಾರದಲ್ಲಿ ಪಡೆದು ನಿರ್ವಹಿಸಲಾಗುತ್ತಿದ್ದು, ಟೋ ಮಾಡಲಾಗುವ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ಬಾಡಿಗೆ ಮೊತ್ತಕ್ಕೆ ಸಂಬಂಧಿಸಿದಂತೆ ದರಗಳನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಹೆಚ್‌ಡಿ 63 ಎಸ್‌ಎಸ್‌ಟಿ 2007, ದಿನಾಂಕ:19.05.2008ರಲ್ಲಿ ನಿಗಧಿಪಡಿಸಿದೆ.

ಮಂಗಳೂರು, ಮೈಸೂರು ಹುಬ್ಬಳ್ಳಿ-ಧಾರವಾಡ ಮತ್ತು ಬೆಳಗಾವಿ ನಗರಗಳಿಗೆ ಅನ್ವಯವಾಗುವಂತೆ ಪ್ರಸ್ತುತ ಇರುವ ದರಗಳನ್ನು, ಟೋಯಿಂಗ್ ಮಾಡುವ ವಾಹನಗಳ ಬಾಡಿಗೆ ದರದ ಏರಿಕೆಯ ಕಾರಣಗಳಿಂದ ಪರಿಷ್ಕರಿಸಬೇಕಾಗಿರುವುದರಿಂದ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ದರ್ಜೆಯ ಅಥವಾ ಅದಕ್ಕಿಂತ ಹೆಚ್ಚಿನ ದರ್ಜೆಯ ಅಧಿಕಾರಿಗಳು ವಾಹನಗಳನ್ನು ಟೋ ಮಾಡಿಸಲು ಹಾಗೂ ವಾಹನ ಚಾಲಕರಿಗೆ/ಮಾಲೀಕರಿಗೆ ಟೋಯಿಂಗ್ ಶುಲ್ಕವನ್ನು ವಿಧಿಸಲು 1963ರ ಕರ್ನಾಟಕ ಮೋಟಾರು ವಾಹನಗಳ ನಿಯಮ 325 ಉಪನಿಯಮ (3)ರಲ್ಲಿ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರದನ್ವಯ ಈ ಕೆಳಕಂಡಂತೆ ಪರಿಷ್ಕರಿಸಿ ನಿಗಧಿಪಡಿಸಿದೆ.

| ಕ್ರ ಸಂ | ವಾಹನಗಳ ವಿಧ | ಹಿಂದಿನ ಅಧಿಸೂಚನೆಯನ್ವಯ ಇರುವ ದರಗಳು | | ಪರಿಷ್ಕೃತ ದರಗಳು | |
|---|---|---|---|---|---|
| | | ಟೋ ಮಾಡಲಾದ ವಾಹನಗಳ ಮಾಲೀಕರಿಂದ ವಸೂಲು ಮಾಡಲಾದ ದರ | ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರ | ಟೋ ಮಾಡಲಾದ ವಾಹನಗಳ ಮಾಲೀಕರಿಂದ ವಸೂಲು ಮಾಡಲಾದ ದರ | ಖಾಸಗಿ ಟೋ ವಾಹನಗಳ ಮಾಲೀಕರಿಗೆ ಪಾವತಿಸಬೇಕಾದ ದರ |
| 1 | ಭಾರಿ ಸಾಗಣೆ ವಾಹನಗಳು | 500-00 | 200-00 | 1500-00 | 750-00 |
| 2 | ಮಧ್ಯಮ ಸಾಗಣೆ ವಾಹನಗಳು | 400-00 | 175-00 | 1250-00 | 625-00 |
| 3 | ಲಘು ವಾಹನಗಳು (ಕಾರುಗಳು, ಮೂರು ಚಕ್ರ ವಾಹನಗಳು, ಟೆಂಪೋಗಳು ಮತ್ತು ಆಟೋ ರಿಕ್ಷಾಗಳು) | 300-00 | 150-00 | 1000-00 | 500-00 |
| 4 | ದ್ವಿಚಕ್ರ ವಾಹನಗಳು | 200-00 | 100-00 | 650-00 | 325-00 |

--2

62



ಇದರೊಂದಿಗೆ ಸಂಚಾರ ನಿಯಮ ಉಲ್ಲಂಘನೆಯ ಆಧಾರದ ಮೇಲೆ ಸಂಬಂಧಿಸಿದ ಪರಿಮಿತಿಯಲ್ಲಿರುವ ನ್ಯಾಯಾಲಯಗಳು ಕರ್ನಾಟಕ ಮೋಟಾರು ವಾಹನಗಳ ಅಧಿನಿಯಮದನ್ವಯ ದಂಡವನ್ನು ವಿಧಿಸಿದಲ್ಲಿ, ಆ ದಂಡವನ್ನೂ ಸಹ ವಾಹನ ಚಾಲಕರು/ಮಾಲೀಕರು ಪಾವತಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶದನ್ವಯ
ಮತ್ತು ಅವರ ಹೆಸರಿನಲ್ಲಿ,

(ಕೆ.ಪದ್ಮನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ(ಕಾನೂನು ಮತ್ತು ಸುವ್ಯವಸ್ಥೆ)
☎080-22033326,e-mail:uslo-home@karnataka.gov.in

ಇವರಿಗೆ:
ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಮುಂದಿನ ವಿಶೇಷ ರಾಜ್ಯಪತ್ರದಲ್ಲಿ ಪ್ರಕಟಿಸಿ, ಒಳಾಡಳಿತ ಇಲಾಖೆ, ಕಾನೂನು & ಸುವ್ಯವಸ್ಥೆ-ಎ ಶಾಖೆಗೆ 25 ಪ್ರತಿಗಳನ್ನು ಒದಗಿಸುವಂತೆ ಕೋರಿದೆ.

ಪ್ರತಿ:
1) ಮಹಾಲೇಖಪಾಲರು, (ಎ ಮತ್ತು ಇ), ಕರ್ನಾಟಕ, ಬೆಂಗಳೂರು.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
3) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು.
4) ಸರ್ಕಾರದ ಪ್ರಧಾನ ಕಾರ್ಯದರ್ಶಿ(ಪಿಸಿಎಎಸ್), ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು.
5) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ, ಬಹು ಮಹಡಿಗಳ ಕಟ್ಟಡ, ಬೆಂಗಳೂರು.
6) ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ನೃಪತುಂಗ ರಸ್ತೆ, ಬೆಂಗಳೂರು.
7) ಹೆಚ್ಚುವರಿ ಪೋಲೀಸ್ ಮಹಾನಿರ್ದೇಶಕರು, ಕಾನೂನು ಮತ್ತು ಸುವ್ಯವಸ್ಥೆ, ಬೆಂಗಳೂರು.
8) ಪೋಲೀಸ್ ಮಹಾನಿರೀಕ್ಷಕರು ಮತ್ತು ಆಯುಕ್ತರು, ಸಂಚಾರ ಮತ್ತು ರಸ್ತೆ ಸುರಕ್ಷತೆ, ಬೆಂಗಳೂರು.
9) ಪೋಲೀಸ್ ಆಯುಕ್ತರು, ಮಂಗಳೂರು/ ಮೈಸೂರು/ ಹುಬ್ಬಳ್ಳಿ-ಧಾರವಾಡ/ ಬೆಳಗಾವಿ ನಗರ.
10) ಉಪಾಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ನಿಯಮಿತ ಬೆಂಗಳೂರು.
11) ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ, ಟಿಟಿಎಂಸಿ, 'ಎ' ಬ್ಲಾಕ್, 1ನೇ ಮಹಡಿ ಶಾಂತಿ ನಗರ, ಬೆಂಗಳೂರು.
12) ಸರ್ಕಾರದ ಉಪ ಕಾರ್ಯದರ್ಶಿ(ಕಾನೂನು & ಸುವ್ಯವಸ್ಥೆ) ರವರ ಆಪ್ತ ಸಹಾಯಕರು, ಒಳಾಡಳಿತ ಇಲಾಖೆ, ವಿಧಾನ ಸೌಧ.
13) ಒಡಿಜಿಸಿ/ಶಾಖಾ ರಕ್ಷ ಕಡತ, ಹೆಚ್ಚುವರಿ ಪ್ರತಿ.

ಅನುಬಂಧ 5

(61)

GOVERNMENT OF KARNATAKA

No:HD 314 SST 2012

Karnataka Government Secretariat,
Vidhana Soudha,
Bangalore, dated:07/09/2012

# NOTIFICATION

In Notification No. HD 285 SST 2004, dated: 04.06.2004, and Notificati No.HD 63 SST 2007, dated:28.02.2008 Government have laid down the towi charges to be levied by Traffic Police from owners of the vehicles found parked no parking zones. In continuation to this and in super session of the Notification N HD 63 SST 2007, dated: 19.05.2008 and-in exercise of the powers conferred by su rule(3),of rule 202, of the Karnataka Motor Vehicles Rules,1989, the Government Karnataka hereby lays down the under mentioned scale of towing charges whi Traffic Police Officers of the rank of Sub- Inspector and above will be entitled collect from the drives/owners of motor vehicles found parked in "No parking zon areas through out Karnataka State in a manner causing obstruction to traffic danger or undue inconvenience to the other users of the roads where in the vehicle are towed with the help of the police wreeker and where the towing is done b private wreckers engaged by the Police Department. This shall be in addition to th fine that may be levied on them by the Jurisdictional courts for violation of th provisions of the Motor Vehicles Act.

This Notification shall come into immediate effect. The Transport and Police Department shall give wide publicity to this Notification and the rates mentioned therein. The same shall also be displayed in public places, om traffic police stations, in vital places like no-parking zones also.

| SL. NO | Type of vehicles | Towing rates to be collected from the vehicle owners | Rates to be paid to the private owners of wreckers |
|---|---|---|---|
| 1 | 2 | 3 | 4 |
| 1 | Heavy Transport vehicles, including Buses. | 500-00 | 200-00 |
| 2 | Medium Transport Vehicles | 400-00 | 175-00 |

